ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಪ [illegible]

ಕನ್ನಡ ಮಹಾಭಾರತ

# ಉದ್ಯೋಗಪರ್ವ ಸಂಗ್ರಹ


ಸಂಪಾದಕರು :

ತ. ಸು. ಶಾಮರಾಯ, ಬಿ. ಎ. (ಆನರ್ಸ್)

ಎಚ್. ಎಂ. ಶಂಕರನಾರಾಯಣರಾವ್, ಎಂ. ಎ.



ಪ್ರಕಾಶಕರು :

[illegible]ಯ್ಯನವರ ಸ್ಮಾರಕ ಗ್ರಂಥಮಾಲೆ

ಮೈಸೂರು

# ಮುನ್ನುಡಿ

ಈ ಮಾಲೆಯ ಎರಡನೆಯ ಗ್ರಂಥವಾದ **ಉದ್ಯೋಗ ಪರ್ವ ಸಂಗ್ರಹ** ನಾವು ಕೈಕೊಂಡಿರುವ ಕನ್ನಡ ಮಹಾಭಾರತ ಸಂಗ್ರಹದ ಮೊದಲನೆಯ ಸಂಪುಟ. ಈ ಸಂಗ್ರಹದ ವಿಷಯವಾಗಿ ಕೆಲವು ಮಾತುಗಳನ್ನು ವಾಚಕರ ಗಮನಕ್ಕೆ ತರಬಯಸುತ್ತೇವೆ.

**ವ್ಯಾಸಮಹರ್ಷಿ**ಗಳಿಂದ ಪ್ರಣೀತವಾದ ಸಂಸ್ಕೃತ ಮಹಾಭಾರತ ವಿಶ್ವಸಾಹಿತ್ಯದಲ್ಲಿ ಬಹು ಗಣ್ಯಸ್ಥಾನವನ್ನು ಗಳಿಸಿ ಕೊಂಡಿರುವ ಒಂದು ಮಹಾಕಾವ್ಯ. ಭರತಖಂಡದ ಸಾಹಿತ್ಯ ಶ್ರೇಣಿಯಲ್ಲಂತೂ ಅದಕ್ಕೆ ಅಗ್ರಸ್ಥಾನವೇ ಮೀಸಲಾಗಿದೆ. ಕನ್ನಡ ವಾಙ್ಮಯವೂ ಅದರ 'ಲೋಕಪೂಜ್ಯತೆ' ಗೆ ಅಪೋಹ ತಂದಿಲ್ಲ. ಕನ್ನಡ ಸಾಹಿತ್ಯ—ಈಗ ನಮಗೆ ತಿಳಿದಿರುವ ಮಟ್ಟಿಗೆ—ಭಾರತದ ಸೃಷ್ಟಿಯಿಂದಲೇ ಮೊದಲಾಯಿತು. ಅಂದಿನಿಂದಲೂ ನಮ್ಮ ಜನ ಭಕ್ತಿಶ್ರದ್ಧೆಗಳಿಂದ, ಗೌರವದಿಂದ ಅದನ್ನು ಓದುತ್ತ ಬಂದಿದ್ದಾರೆ. ಹಲವಾರು ಕನ್ನಡ ಕವಿಗಳು ಬೇರೆಬೇರೆ ದೃಷ್ಟಿಕೋನಗಳಿಂದ ಆ ಕಾವ್ಯವನ್ನು ಪರಿಶೀಲಿಸಿ ತಮ್ಮ ತಮ್ಮ ವಿಶಿಷ್ಟ ಶೈಲಿಗಳಿಂದ ಅದನ್ನು ಬರೆದಿಟ್ಟಿದ್ದಾರೆ. ಈ ವಿವಿಧ ಭಾರತಗಳ ಸಾಲಿನಲ್ಲಿ ಅತ್ಯಂತ ಜನಪ್ರಿಯವಾದ ಕಾವ್ಯ **ಗದುಗಿನ ಭಾರತ.**

ಗದುಗಿನ ಭಾರತ ಅಥವಾ ನಾರಣಪ್ಪನ ಭಾರತ ಬೃಹತ್ತು ಮಹತ್ತುಗಳೆರಡರಲ್ಲಿಯೂ ಅನುಪಮವಾದ ಗ್ರಂಥ. ಅದರ ಮಹತ್ತನ್ನು ಕಂಡು ಮನ್ನಣೆಮಾಡಬೇಕಾದುದೇ. ಆದರೆ ಅದರ ಬೃಹತ್ತನ್ನು ಕಂಡರೆ ಬೆದರಿಕೆಯಾಗುತ್ತದೆ. ಕಾವ್ಯ ಹುಟ್ಟಿ ಐದು ಶತಮಾನಗಳ ಮೇಲಾಗಿದೆ. ಅಂದಿಗೂ ಇಂದಿಗೂ ಜನರ ಸಾಹಿತ್ಯಾಭಿರುಚಿಯಲ್ಲಿ ಅಜಗಜಾಂತರ ವ್ಯತ್ಯಾಸ ಕಂಡುಬರುವುದರಿಂದ ಈ ದೊಡ್ಡ ಕಾವ್ಯವನ್ನು ಸಂಗ್ರಹಿಸಿ ಕೊಡುವುದು ಈಗ ಮೊದಲು ನಡೆಯಬೇಕಾದ ಕೆಲಸವಾಗಿದೆ. ಈ ಉದ್ದೇಶ ಸಾಧನೆಗಾಗಿಯೇ ನಾವು ಈ ಸಂಗ್ರಹ ಕಾರ್ಯವನ್ನು ಕೈಕೊಂಡಿದ್ದೇವೆ. ಕನ್ನಡ ಮಹಾಭಾರತದ ಕಥಾಸರಣಿ ಕೆಡದಂತೆ, ಒಟ್ಟು ಕಥೆಯ ಸ್ವಾರಸ್ಯಕ್ಕೆ, ಪಾತ್ರನಿರೂಪಣಕ್ಕೆ ಭಂಗಬಾರದಂತೆ, ಅವಶ್ಯವಾದ

ವರ್ಣನೆಯ ಮತ್ತು ವಿವರಣೆಯ ಸಾರ ಬಿಟ್ಟುಹೋಗದಂತೆ, ಎಲ್ಲಕ್ಕೂ ಮಿಗಿಲಾಗಿ ಕವಿಯ ವ್ಯಕ್ತಿತ್ವಕ್ಕೂ ಮತ್ತು ಆತನ ವಿಶೇಷ ಪ್ರತಿಭೆಗೂ ಲೋಪಬರದಂತೆ ಈ ಸಂಗ್ರಹ ಕಾರ್ಯವನ್ನು ಮಾಡಬೇಕೆಂಬುದೇ ನಮ್ಮ ಗುರಿ. ಈ ಉದ್ಯೋಗಪರ್ವ ಸಂಗ್ರಹದಲ್ಲಿ ಈ ಗುರಿಯನ್ನು ಬಹುಮಟ್ಟಿಗೆ ಸಾಧಿಸಿರುವೆವೆಂಬ ಭರವಸೆ ನಮಗಿದೆ.

ನಾವು ಕೈಕೊಂಡಿರುವ ಈ ಭಾರತ ಸಂಗ್ರಹ 'ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ' ಯಲ್ಲಿ ಅಚ್ಚಾಗಿ ಪ್ರಕಟವಾಗುವುದು ಉಚಿತ ವಾಗಿಯೇ ಇದೆ. ಗದುಗಿನ ಭಾರತ ವೆಂಕಣ್ಣಯ್ಯನವರಿಗೆ ಅಚ್ಚುಮೆಚ್ಚಾದ ಕಾವ್ಯ. ಅವರು ಅದನ್ನು ಸಂಪಾದಿಸಿ, ಅಚ್ಚುಕಟ್ಟಾಗಿ ಮುದ್ರಿಸಬೇಕೆಂಬ ಉದ್ದೇಶದಿಂದ ಈ ಕಾವ್ಯದ ಹಲವಾರು ಓಲೆಯ ಪ್ರತಿಗಳನ್ನು ಸಂಪಾದಿಸಿ ಟ್ಟಿದ್ದರು ; ಭಾರತದ ಕೈಬರಹದ ಪ್ರತಿಯೊಂದನ್ನು ಪ್ರತಿಮಾಡಿಸಿದ್ದರು. ಅವರು ಪ್ರತಿಮಾಡಿಸಿದ್ದ ಕೈಬರಹದಪ್ರತಿಯಲ್ಲಿ ಮೂರು ಪರ್ವಗಳು—ಆದಿ, ಅರಣ್ಯ, ಉದ್ಯೋಗ—ಈಗ ದೊರೆತಿವೆ. ಈ ಉದ್ಯೋಗ ಪರ್ವದ ಪ್ರತಿ ಯಿಂದ ನಮ್ಮ ಕಾರ್ಯಕ್ಕೆ ತುಂಬ ನೆರವು ದೊರಕಿತು.

ಕುಮಾರವ್ಯಾಸನನ್ನು ಜನಸಾಮಾನ್ಯಕ್ಕೆ ಪರಿಚಯ ಮಾಡಿ ಕೊಡಲು ಸಿದ್ಧಪಡಿಸಿರುವ ಈ ಸಂಗ್ರಹದಲ್ಲಿ ಪಾಠಾಂತರಗಳನ್ನು ಗುರುತು ಮಾಡುವುದು ಅನವಶ್ಯವೆಂದು ತೋರಿ ಬಂದ ಕಾರಣ ಅವನ್ನು ಗುರುತು ಮಾಡುವ ಗೋಜಿಗೇ ಹೋಗಿಲ್ಲ. ಆದರೂ ಈ ಸಂಗ್ರಹದ ಪಾಠವನ್ನು ಒಂದು ಕೈಬರಹದ ಪ್ರತಿಯಿಂದಲೂ, ನಾಲ್ಕು ಓಲೆಯ ಪ್ರತಿಗಳ ಸಹಾಯ ದಿಂದಲೂ ತಿದ್ದಿದೆ. ಇವುಗಳ ಪರಿಚಯವನ್ನಿಲ್ಲಿ ಸ್ಥೂಲವಾಗಿ ಮಾಡಿ ಕೊಟ್ಟಿದೆ. ಕೈಬರಹದ ಪ್ರತಿ, ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟಿನಲ್ಲಿರುವ ಕೆ. ೨೦೫ ನೆಯ ನಂಬರಿನ ಓಲೆಯ ಪ್ರತಿಕೃತಿ. ಕ್ರಿ. ಶ. ೧೫೫೪ ರಲ್ಲಿ ಹುಟ್ಟಿದ ಈ ಪ್ರತಿ ಇದುವರೆಗೆ ನಮಗೆ ದೊರೆ ತಿರುವ ಕನ್ನಡ ಮಹಾಭಾರತದ ಕೈಬರಹದ ಪ್ರತಿಗಳಲ್ಲಿ ಅತ್ಯಂತ ಪ್ರಾಚೀನವಾದುದು. ಇದರ ಪಾಠವನ್ನೇ ಇಲ್ಲಿ ಸಾಮಾನ್ಯವಾಗಿ ಅಂಗೀ ಕರಿಸಿದೆ. ಈ ಕೈಬರಹದ ಪ್ರತಿಯಲ್ಲಿ ಇನ್ನೆರಡು ಓಲೆಯ ಪ್ರತಿಗಳ ಪಾಠಾಂತರ ದೊರಕುತ್ತದೆ. ಶ್ರೀ. ಆರ್. ಬಿ. ಪ್ರೋದ್ದಾರ್ ಅವರು ಕೊಟ್ಟ ಕಾರವಾರಿನ ಪ್ರತಿಗೆ ಕಾ ಎಂಬ ಗುರುತನ್ನು ಈ ಕೈಬರಹದ ಪ್ರತಿ

ಯಲ್ಲಿಟ್ಟುಕೊಂಡಿದೆ. ಶ್ರೀ. ಡಿ. ಎಲ್. ನರಸಿಂಹಾಚಾರ್ಯರು ಕೊಟ್ಟ ಅಳಿಲುಘಟ್ಟದ ಪ್ರತಿಗೆ **ಗ** ಎಂಬ ಚಿನ್ಹೆಯನ್ನು ಬಳಸಿದೆ.

ನಮ್ಮಲ್ಲಿರುವ ನಾಲ್ಕು ಓಲೆಯ ಪ್ರತಿಗಳಲ್ಲಿ ಒಂದಕ್ಕೆ **ಕ** ಎಂಬ ಗುರುತನ್ನಿಟ್ಟುಕೊಂಡಿದ್ದೇವೆ. ಗ್ರಂಥವನ್ನು ಪ್ರತಿಮಾಡಿದ ಕಾಲವನ್ನು ಇದರಲ್ಲಿ ಹೇಳಿಲ್ಲ. ಭಾರತದ ಆದಿಪಂಚಕವೂ, ಭೀಷ್ಮಪರ್ವದ ಸ್ವಲ್ಪ ಭಾಗವೂ ಇದರಲ್ಲಿದೆ. ಶಕಟರೇಫವನ್ನು ಇಲ್ಲಿ ತಪ್ಪುತಪ್ಪಾಗಿ ಬಳಸಿದೆ. **ಗ** ಎಂಬ ಇನ್ನೊಂದು ಪ್ರತಿಯಲ್ಲಿ ದಶಪರ್ವಗಳು ಸಮಗ್ರವಾಗಿ ದೊರೆಯು ವುವಲ್ಲದೆ **ಐರಾವತ** ವೆಂಬ ಕಾವ್ಯವೂ ಉಂಟು. ಗ್ರಂಥವನ್ನು ಪ್ರತಿ ಮಾಡಿದ ಕಾಲವನ್ನು ಇಲ್ಲಿ ಹೇಳಿಲ್ಲ. ಇನ್ನೊಂದು ಓಲೆಯ ಪ್ರತಿ ಶಾ. ಶ. ೧೭೩೮ ರಲ್ಲಿ ಚಿಕ್ಕಬಾಜೂರಿನಲ್ಲಿ ತಯಾರಾದದ್ದು. ಇದೇ ನಮ್ಮ **ಜ** ಪ್ರತಿ. ಇದರಲ್ಲಿ ಅಧಿಕ ಪದ್ಯಗಳುಂಟು. ಹತ್ತು ಪರ್ವಗಳ ಸಮಗ್ರವಾದ ಪ್ರತಿ ಇದು. ಹೊಳಲಕೆರೆಯ ಶ್ರೀ ಎ.ಎಸ್. ಕೃಷ್ಣ ಶೆಟ್ಟರು ಕೊಟ್ಟ ಹ ಗುರುತಿನ ಪ್ರತಿಯಲ್ಲಿ ಈ ಪರ್ವದ ಎರಡು ಸಂಧಿಗಳು ಮಾತ್ರ ದೊರಕುತ್ತವೆ. ಜ ಮತ್ತು ಹ ಪ್ರತಿಯ ಮೂಲ ಒಂದೇ ಎಂದು ತೋರುತ್ತದೆ. ಏಕೆಂದರೆ ಇವುಗಳಲ್ಲಿ ದೊರಕುವ ಪಾಠ ಒಂದೇ ಆಗಿದೆ.

ಕೈಬರಹದ ಪ್ರತಿ, ಓಲೆಯ ಪ್ರತಿಗಳು, ಮುದ್ರಿತ ಪ್ರತಿಗಳು, ಇವೆಲ್ಲವನ್ನೂ ಇಟ್ಟುಕೊಂಡು ಸಂಪಾದನೆಯ ಕಾರ್ಯವನ್ನು ಆದಷ್ಟು ಶ್ರದ್ಧೆಯಿಂದ ನಡೆಸಿದೆ. ಮೊದಲನೆಯ ಮುದ್ರಣಕ್ಕಿಂತ ಇದು ಬಹು ಮಟ್ಟಿಗೆ ಉತ್ತಮವಾಗಿದೆಯೆಂಬ ನಂಬಿಕೆ ನಮಗುಂಟು. ಇದರಲ್ಲಿ ಲೋಪದೋಷಗಳುಂಟೆಂಬ ಅರಿವು ನಮಗೇ ಉಂಟಾಗಿದೆ. ಮುದ್ರಣ ದಿಂದ ಮುದ್ರಣಕ್ಕೆ ಅವು ನೇರ್ಪಾಗಬೇಕು.

ಮೊದಲನೆಯ ಮುದ್ರಣದಲ್ಲಿ ಶಕಟರೇಫವನ್ನು ಬಳಸಿರಲಿಲ್ಲ. ಈ ಮುದ್ರಣದಲ್ಲಿ ಅದನ್ನು ಉಚಿತವಾದೆಡೆಯಲ್ಲಿ ಬಳಸಿದೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪಠ್ಯಪುಸ್ತಕನಿಯಾಮಕ ಸಮಿತಿಯವರು, ಈ ಸಂಗ್ರಹವನ್ನು ೧೯೪೫ನೆಯ ವರುಷದ ಇಂಟರ್ ಮೀಡಿಯೆಟ್ ಪರೀಕ್ಷೆಗೆ ಪಠ್ಯ ಪುಸ್ತಕವನ್ನಾಗಿ ನಿಯಮಿಸಿದ ಕಾರಣ,

ಇದನ್ನು ಎರಡನೆಯ ಬಾರಿ ಅಚ್ಚು ಮಾಡಿಸುವ ಸುಯೋಗ ದೊರಕಿತು. ಇದಕ್ಕಾಗಿ ವಿಶ್ವವಿದ್ಯಾನಿಲಯಕ್ಕೂ, ಸಮಿತಿಯ ಸದಸ್ಯರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಕೆಲವು ಕಡೆ ನಮಗುಂಟಾದ ಸಂದೇಹಗಳನ್ನು ನಿವಾರಿಸಿಕೊಟ್ಟ ನಮ್ಮ ವಿದ್ಯಾಗುರುಗಳಾದ ಪ್ರೊ॥ ಎ. ಆರ್. ಕೃಷ್ಣಶಾಸ್ತ್ರೀ ಎಂ. ಎ. ಅವರಿಗೆ ನಮ್ಮ ಅನಂತ ವಂದನೆಗಳು.

ಈ ಸಂಗ್ರಹ ಕಾರ್ಯಕ್ಕೆ ನಮ್ಮ ಗುರುಗಳ ಆಶೀರ್ವಾದ ಸಂಪೂರ್ಣವಾಗಿದೆಯೆಂದು ನಮ್ಮ ಭಾವನೆ. ಈ ಸಂಗ್ರಹ ಜನಪ್ರಿಯ ವಾದರೆ ನಮ್ಮ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇವೆ.

ಮೈಸೂರು<br>೨೦–೬–೧೯೪೭

ತ. ಸು. ಶಾಮರಾಯ<br>ಹೆಚ್. ಎಂ. ಶಂಕರನಾರಾಯಣರಾವ್

## ಮೂರನೆಯ ಮುದ್ರಣ

ಎರಡನೆಯ ಮುದ್ರಣದಲ್ಲಿ ಉಳಿದಿದ್ದ ಅಚ್ಚಿನ ತಪ್ಪುಗಳನ್ನು ಸಾಧ್ಯವಾದ ಮಟ್ಟಿಗೂ ಸರಿಪಡಿಸಿ ಶಬ್ದಕೋಶದಲ್ಲಿ ಸೂಕ್ತ ಕಂಡ ಬದ ಲಾವಣೆಗಳನ್ನು ಮಾಡಿದೆ.

ಈ ಸಂಗ್ರಹವನ್ನು ಬೊಂಬಾಯಿ ವಿಶ್ವವಿದ್ಯಾನಿಲಯದ ಇಂಟರ್ ಮೀಡಿಯೇಟ್ ಪರೀಕ್ಷೆಗೆ ಪಠ್ಯಪುಸ್ತಕವನ್ನಾಗಿ ನಿಯಮಿಸಿದುದಕ್ಕೆ ವಿಶ್ವ ವಿದ್ಯಾನಿಲಯಕ್ಕೂ, ಪಠ್ಯಪುಸ್ತಕ ನಿಯಾಮಕ ಸಮಿತಿಗೂ ಕೃತಜ್ಞ ರಾಗಿದ್ದೇವೆ.

ಸಂಪಾದಕರು

# ವಿಷಯ ಸೂಚಿಕೆ

ವಿಷಯ ಪುಟ

## ಪೀಠಿಕೆ

### ೧. ಕವಿಚರಿತ್ರೆ

ಮಹಾಕವಿ ನಾರಣಪ್ಪನ ಕಾಲ, ಮತಗಳ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದು, ವಿಪುಲವಾದ ಚರ್ಚೆ ನಡೆದಿದೆ. ಇಲ್ಲಿ ಆ ಚರ್ಚೆಯ ಗೋಜಿಗೆ ಹೋಗದೆ, ಬಹುಜನಸಮ್ಮತವಾದ ಒಂದು ನಿರ್ಧಾರಕ್ಕೆ ನಾವೂ ಶರಣು ಹೋಗುತ್ತೇವೆ.

ನಾರಣಪ್ಪನ ಕಾಲ ಕ್ರಿ. ಶ. ೧೫ನೆಯ ಶತಮಾನದ ಪೂರ್ವಾರ್ಧವೆಂದು ಶ್ರೀಮಾನ್ ಮಂಜೇಶ್ವರ ಗೋವಿಂದ ಪೈ ಅವರು ನಿರ್ಧರಿಸಿದ್ದಾರೆ.* ಅವರು ಕೊಡುವ ಕಾರಣಗಳು ಸ್ಥೂಲವಾಗಿ ಇಷ್ಟು—

೧. ಗದುಗಿನ ವೀರನಾರಾಯಣಸ್ವಾಮಿ ದೇವಸ್ಥಾನದಲ್ಲಿರುವ ಕ್ರಿ. ಶ. ೧೫೩೯ರ ಶಾಸನ ಒಂದರಲ್ಲಿ 'ಕುಮಾರವ್ಯಾಸ' ಎಂಬ ಹೆಸರನ್ನು ಸ್ಪಷ್ಟವಾಗಿ ತಿಳಿಸಿರುವುದರಿಂದಲೂ, ಕುಮಾರವ್ಯಾಸನು ರಚಿಸದೆ ಬಿಟ್ಟ ಇತರ ಪರ್ವಗಳನ್ನು ಕೃಷ್ಣರಾಯ (ಕ್ರಿ. ಶ. ೧೫೦೯–೧೫೨೯)ನ ಅಪ್ಪಣೆಯ ಮೇರೆಗೆ ತಾನು ರಚಿಸಿದೆನೆಂದು ತಿಮ್ಮಣ್ಣ ಕವಿ ತನ್ನ ಶಾಂತಿಪರ್ವದಲ್ಲಿ ಹೇಳಿಕೊಂಡಿರುವುದರಿಂದಲೂ ನಾರಣಪ್ಪನು ಕ್ರಿ. ಶ. ೧೫೦೦ಕ್ಕೂ ಹಿಂದಿನವನೆಂಬುದು ಸ್ಪಷ್ಟವಾಗಿದೆ.

೨. ನಾರಣಪ್ಪ ತನ್ನ ಕಾವ್ಯದಲ್ಲಿ, ದ್ರೌಪದೀ ಸ್ವಯಂವರಕ್ಕೆ 'ಮಹೇಶ್ವರ ಜೈನ ಭೈರವ ಬುದ್ಧ ಲಿಂಗಿಗಳು' ಬಂದಿದ್ದರೆಂದು ಹೇಳಿದ್ದಾನೆ. 'ಲಿಂಗಿ' ಎಂದು ವ್ಯವಹರಿಸುವುದು ಬಸವೇಶ್ವರನ ಸಂಪ್ರದಾಯದ ಲಿಂಗವಂತರಾದ ವೀರಶೈವರನ್ನೇ. ಅಲ್ಲದೆ ತನ್ನ ಕಾವ್ಯದಲ್ಲಿ ಅಲ್ಲಲ್ಲಿ ಬಲ್ಲಾಳದಡ್ಡಿ, ಬಲ್ಲಾಳನಾಥ ಎಂಬ ಮಾತುಗಳನ್ನು ಕವಿ ಬಳಸಿದ್ದಾನೆ. ಇದು ಹೊಯ್ಸಳರ ವೀರಬಲ್ಲಾಳನನ್ನು ಸೂಚಿಸುತ್ತದೆ. ಈ ಕಾರಣಗಳಿಂದ ಕವಿ ಕ್ರಿ. ಶ. ೧೨೦೦ರಿಂದ ಈಚೆಯವನಾಗಿರಬೇಕು.

೩. ನಾರಣಪ್ಪ ಕ್ರಿ. ಶ. ೧೨೦೦ರಿಂದ ೧೫೦೦ರ ಮಧ್ಯದಲ್ಲಿ

---

* ಕುಮಾರವ್ಯಾಸ ಪ್ರಶಸ್ತಿ, ಕಾಲವಿಚಾರ.

ಯಾವಾಗ ಇದ್ದನೆಂಬುದನ್ನು ನಿರ್ಧರಿಸಲು, ಆತನ ಕಾವ್ಯದ ಆಂತರಿಕ ಪ್ರಮಾಣಗಳನ್ನು ಪರಿಶೀಲಿಸಬೇಕು.

(ಅ) ಭಾರತದಲ್ಲಿ ಮರಾಠೀ ಭಾಷೆಯ ಅನೇಕ ಮಾತುಗಳು ಬಳಕೆಯಾಗಿವೆ. ಅಲ್ಲದೆ ಈಗ ಪೃಥಮ್ಯೈಕ ವಚನದಲ್ಲಿ ಅಕಾರಾಂತವಾಗಿರ ತಕ್ಕ ನಾಮವಾಚಕಗಳು ಉಕಾರಾಂತವಾಗಿ ಪ್ರಯೋಗವಾಗಿರುವ ಅಚ್ಚ ಮರಾಠೀ ವಿಭಕ್ತಿರೂಪಗಳನ್ನೊಳಗೊಂಡ ಒಂದು ಇಡೀ ಷಟ್ಪದಿಯೇ ಭೀಷ್ಮಪರ್ವದ ನಾಲ್ಕನೆಯ ಸಂಧಿ ೭೦ನೆಯ ಪದ್ಯದಲ್ಲಿ ಕಂಡುಬರುತ್ತದೆ* ಈ ಬಗೆಯಾದ ರೂಪ ಕ್ರಿ. ಶ. ೧೨೯೦ರಲ್ಲಿ ರಚಿತವಾದ 'ಜ್ಞಾನೇಶ್ವರಿ' ಎಂಬ ಮರಾಠೀ ಗ್ರಂಥದಲ್ಲಿಯೂ ಕಂಡುಬರುತ್ತದೆ. ಮುಂದೆ ಕೆಲವು ವರ್ಷಗಳಲ್ಲಿಯೇ ಈ ಉಕಾರಾಂತ ಪ್ರಯೋಗ ಲುಪ್ತವಾಗಿ ಹೋಗಿದೆ. ಆದ್ದರಿಂದ ನಾರಣಪ್ಪ ೧೨೯೦ರ ಸರಿ ಸುಮಾರಿನಲ್ಲಿ ಇದ್ದಿರಬೇಕು.

(ಆ) ಕುಮಾರವ್ಯಾಸ ಭಾರತದಲ್ಲಿ ತುರುಕರು, ಸಾಹಣ ಸಮುದ್ರ, ಹಸಣ, ತೆಂಕಣಚೇದಿ, ಸಮುದ್ರ ಹೋಸಲ-ಇತ್ಯಾದಿ ರಾಜ್ಯಗಳ ರಾಜರು ವ್ಯವಹೃತರಾಗಿದ್ದಾರೆ. ಈ ಮಾತುಗಳು ಸಂಸ್ಕೃತ ಭಾರತದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಸಾಹಣರೆಂದಿರುವವರು ದೇವಗಿರಿಯ ಯಾದವ ವಂಶದ ಅರಸರಾದ ಸೇಉಣರೇ ಎಂದು ತೋರುತ್ತದೆ. ಈ ವಂಶ ನಾಶ ವಾದದ್ದು ಕ್ರಿ. ಶ. ೧೩೧೮ರಲ್ಲಿ. ಸಮುದ್ರ ಹೋಸಲ ಎಂದು ಕರೆದಿರು ವುದು ದ್ವಾರಸಮುದ್ರದ ಹೊಯ್ಸಳರನ್ನು; ದ್ವಾರಸಮುದ್ರ ಕ್ರಿ. ಶ. ೧೩೧೦ ರಲ್ಲಿ ತುರುಕರ ಕೊಳ್ಳೆಗೆ ಈಡಾಯಿತು; ಕ್ರಿ. ಶ. ೧೩೨೭ರಲ್ಲಿ ಸಂಪೂರ್ಣ ವಾಗಿ ನಾಶವಾಯಿತು. ನಾರಣಪ್ಪ ಈ ಅರಸುಗಳನ್ನು ಕಂಡೋ ಕೇಳಿಯೋ ಇರಬೇಕು. ಆದ್ದರಿಂದ ಆ ಕಾಲದ ಹಿಂಚು ಮುಂಚಿನವನಾಗಿರಬೇಕು.

(ಇ) ತರುಷ್ಕ ಅಥವಾ ತುರುಕ ದೊರೆಯನ್ನು ಧರ್ಮರಾಜನ ಪಟ್ಟಾಭಿಷೇಕಕ್ಕೆ ಕರಸಿ ಕವಿ ತನ್ನ ಕಾವ್ಯದಲ್ಲಿ ಮನ್ನಣೆ ತೋರಿಸುವು ದರಿಂದಲೂ; ಎಲ್ಲಿಯೂ ಅವರ ಹಾವಳಿಯನ್ನು ವ್ಯಂಗ್ಯವಾಗಿ ಕೂಡ ಸೂಚಿಸಿಲ್ಲವಾದುದರಿಂದಲೂ ಈತನು ತುರುಕರ ಹಾವಳಿ ಕರ್ಣಾಟಕಕ್ಕೆ ಸೋಕುವ ಮುನ್ನವೇ ಇದ್ದವನಾಗಿರಬೇಕು.

(ಈ) ಕ್ರಿ. ಶ. ೧೨೧೩ರಲ್ಲಿ ಗದುಗು ಪ್ರಾಂತವು ಹೊಯ್ಸಳರ

---

* ಈ ಪದ್ಯ ನಮ್ಮಲ್ಲಿರುವ ಕೈಬರಹದ ಪ್ರತಿಗಳಲ್ಲಿ ಕಂಡುಬರುವುದಿಲ್ಲ.

ಕೈತಪ್ಪಿ ಸೇಉಣರ ವಶವಾಯಿತು. ಕವಿಯು ತನ್ನ ಕಾವ್ಯದಲ್ಲಿ ವಿಪುಲವಾಗಿ ಮರಾಠೀ ಪದಗಳನ್ನು ಬಳಸಿರುವುದರಿಂದ, ಆತನು ೧೨೧೩ಕ್ಕೆ ಈಚೆಯಲ್ಲೇ ಕಾವ್ಯವನ್ನು ಬರೆದಿರಬೇಕು. ಆದರೆ ತಾನು ಸೇಉಣರ ರಾಜ್ಯದಲ್ಲಿದ್ದರೂ ತನ್ನ ಕಾವ್ಯದಲ್ಲಿ ಹೊಯ್ಸಳರಿಗೆ ಗೌರವ ತೋರಿಸುವುದರಿಂದ ಆತನ ನಾಡು ಹೊಯ್ಸಳರ ಕೈತಪ್ಪಿ ಇನ್ನೂ ಬಹಳಕಾಲವಾಗಿದ್ದಿರಲಾರದು; ಹೆಚ್ಚೆಂದರೆ ೧೦–೧೨ ವರ್ಷಗಳಾಗಿರಬಹುದು.

ಆದ್ದರಿಂದ ನಾರಣಪ್ಪ ಕ್ರಿ. ಶ. ೧೨೩೦–೩೫ರೊಳಗೆ ಇದ್ದಿರಬೇಕು.

ಮಹಾಕವಿಯೊಬ್ಬನು ತಮ್ಮವನೆಂದು ಹೇಳಿಕೊಳ್ಳುವುದು ಹೆಮ್ಮೆಯೇ ಸರಿ. ನಾರಣಪ್ಪ ವೀರಶೈವನೆಂದು, ಬ್ರಾಹ್ಮಣನೆಂದು–ಬ್ರಾಹ್ಮಣರಲ್ಲಿ ಸ್ಮಾರ್ತನೆಂದು, ವೈಷ್ಣವನೆಂದು, ಭಾಗವತ ಪಂಥದವನೆಂದು–ವಾದಮಾಡುವುದುಂಟು. ಇದ್ದುದನ್ನು ಇದ್ದಂತೆ ಕಂಡುಹಿಡಿಯಲು ಹೋಗಬೇಕೆಂಬ ದೃಷ್ಟಿ ಸಾಧುವಾದುದಾದರೂ ಅಂಧಶ್ರದ್ಧೆಯಿಂದ ಹುರಿಗೊಂಡು, ಕದನಕ್ಕೆ ಇಳಿಯುವುದು ಅಷ್ಟು ಉಚಿತವಾದುದಲ್ಲ. ನಾರಣಪ್ಪನಂತಹ ಮಹಾಕವಿ ನಮ್ಮ ನಾಡಿನವನೆಂಬ ದೊಡ್ಡತನವೇ ನಮಗೆ ಸಾಲದೆ? ಎಲ್ಲೆಡೆಯಿಂದಲೂ ಆಹಾರವನ್ನು ಹೀರಿ ಗಗನ ಚುಂಬಿತವಾಗಿ ನಿಂತಿರುವ ಭವ್ಯವೃಕ್ಷದಂತೆ, ಕವಿ ಎಲ್ಲ ಮತಗಳ, ಎಲ್ಲ ಧರ್ಮಗಳ ಸಾರವನ್ನು ಹೀರಿ, ತನ್ನ ಸಾರಸ್ವತ ಸಂಪತ್ತಿನಿಂದ ತೊಳಗಿ ಬೆಳಗುವನು. ಕುಮಾರವ್ಯಾಸನ ಕಾವ್ಯದಲ್ಲಿ ಸರ್ವ ಧರ್ಮಗಳು ಸಮನ್ವಯಗೊಂಡಿವೆ. ವಿಷ್ಣುವನ್ನು ಅನನ್ಯ ಭಕ್ತಿಯಿಂದ ಸ್ತುತಿಸುತ್ತಾನೆ; ಹಾಗೆಯೇ ಶಿವನನ್ನೂ ಸ್ತುತಿಸುತ್ತಾನೆ. ಅವನ ಕಾವ್ಯದಲ್ಲಿ ಭಕ್ತಿಮಾರ್ಗವಿದೆ, ಕರ್ಮಮಾರ್ಗವಿದೆ, ಜ್ಞಾನಮಾರ್ಗವಿದೆ; ದ್ವೈತವಿದೆ, ಅದ್ವೈತವಿದೆ, ವಿಶಿಷ್ಟಾದ್ವೈತವಿದೆ. ಆದ್ದರಿಂದ ಆತನನ್ನು ನಮ್ಮ ಮಟ್ಟಕ್ಕೆ ಎಳೆದು, ಜಾತಿಮತಗಳ ಸಂಕೋಲೆಯಲ್ಲಿ ಬಿಗಿದು, ಇದಮಿತ್ಥಂ ಎಂದು ಊಹೆಯಿಂದ ಹೇಳುವುದು ಸಾಹಸದ ಕೆಲಸ. ಹೆಸರಿನಿಂದ ಆತನು ಬ್ರಾಹ್ಮಣನೆಂಬುದು ಖಂಡಿತ. ಅಲ್ಲದೆ ಸಕಲ ಶಾಸ್ತ್ರಾಗಮಪುರಾಣಾದಿಗಳನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದ ಬಹು ದೊಡ್ಡ ವ್ಯಕ್ತಿ.

ಕವಿಯು ಹುಟ್ಟಿದೂರು ಕೋಳಿವಾಡವೆಂಬ ಒಂದು ಚಿಕ್ಕ ಗ್ರಾಮ. ಆ ಊರು ಆತನ ವಂಶದವರಿಗೆ ಉಂಬಳಿಯಾಗಿ ಬಂದಿತ್ತೆಂದು ಹೇಳುತ್ತಾರೆ. ಈತನು ಗದುಗಿನ ವೀರನಾರಾಯಣಸ್ವಾಮಿಯ ಅಂಕಿತದಲ್ಲಿ

ತನ್ನ ಗ್ರಂಥವಾದ ಕನ್ನಡ ಭಾರತವನ್ನು ಬರೆದಿದ್ದಾನೆ. ಸಂಸ್ಕೃತ ಭಾರತದ ಮೊದಲ ಹತ್ತು ಪರ್ವಗಳ ಕಥೆಯನ್ನು ಮಾತ್ರ ಈತ ಕನ್ನಡಿಸಿದ್ದಾನೆ. ಅಲ್ಲಿಗೇ ಕಾವ್ಯ ಎಂಟು ಸಹಸ್ರ ಪದ್ಯಗಳಿಗಿಂತಲೂ ಹೆಚ್ಚಾಗಿ ಬೆಳೆದುಹೋಗಿದೆ. ನಾರಣಪ್ಪ ಭಾರತವನ್ನು ಮಾತ್ರವಲ್ಲದೆ "ಐರಾವತ" ವೆಂಬ ಮತ್ತೊಂದು ಕಾವ್ಯವನ್ನೂ ಬರೆದಿರುವನೆಂದು ಕವಿಚರಿತೆಕಾರರಾದ ದಿವಂಗತ ಆರ್. ನರಸಿಂಹಾಚಾರ್ಯರು ತಿಳಿಸುತ್ತಾರೆ.

ಮಹಾಕವಿ ನಾರಣಪ್ಪನನ್ನು ಆತನ ತರುವಾಯ ಬಂದ ಅನೇಕ ಕವಿಗಳು ಬಾಯಿತುಂಬ ಹೊಗಳಿದ್ದಾರೆ. ನಮ್ಮ ನಾಡಿನ ಅತ್ಯಂತ ಜನಪ್ರಿಯವಾದ ಕಾವ್ಯಗಳಲ್ಲಿ ಭಾರತವೂ ಒಂದು.

## ೨. ಕಾವ್ಯದ ಮೂಲ, ಅದರ ಹಿರಿಮೆ.

ನಾರಣಪ್ಪನ ಕನ್ನಡ ಮಹಾಭಾರತಕ್ಕೆ ಮೂಲ ಸಂಸ್ಕೃತದ ಮಹಾಭಾರತ. ಇದರ ಕರ್ತೃ ವ್ಯಾಸಮಹರ್ಷಿಯೆಂದು ಪ್ರತೀತಿ. ಈತನ ಮತ್ತು ಈತನ ಕಾವ್ಯದ ಹಿರಿಮೆಯನ್ನು ಕವಿಯೊಬ್ಬನು 'ಜಗತ್ತಿನಲ್ಲಿ ಇರುವುದೆಲ್ಲವೂ ಭಾರತದಲ್ಲಿದೆ; ಭಾರತದಲ್ಲಿ ಇಲ್ಲದುದು ಜಗತ್ತಿನಲ್ಲಿ ಇಲ್ಲ' ಎಂದು ಹೇಳಿದ್ದಾನೆ. ಇದು ಪರಮಪೂಜ್ಯವಾದ ಧರ್ಮಗ್ರಂಥವೆಂದು ಪರಿಗಣಿತವಾಗಿದೆ. ಧರ್ಮವಿಷಯಕವಾದ ಅನೇಕ ಕ್ಲಿಷ್ಟಸಮಸ್ಯೆಗಳಿಗೆ ಇಲ್ಲಿ ಸದುತ್ತರ ದೊರೆಯುತ್ತದೆ. ಆದ್ದರಿಂದ, ಧರ್ಮಕ್ಕೆ ದೊಡ್ಡ ಆಧಾರದಂತಿರುವ ಈ ಗ್ರಂಥವನ್ನು ಜನತೆ ಪಂಚಮವೇದವೆಂದು ಕರೆದು ಗೌರವಿಸಿದೆ. ಕಾವ್ಯದ ಮಧ್ಯದಲ್ಲಿ ಜನಮೇಜಯನಿಗೋ ಧೃತರಾಷ್ಟ್ರನಿಗೋ, ಋಷಿಗಳಿಗೋ ಧರ್ಮವಿಷಯಕವಾದ ಸಂದೇಹ ಹುಟ್ಟಿದ ಕಡೆ, ಅದರ ನಿವಾರಣೆಗಾಗಿ ಧರ್ಮಜಿಜ್ಞಾಸೆ ನಡೆದಿದೆ; ರೌಮಹರ್ಷಣಿ, ಸನತ್ಸುಜಾತಾದಿಗಳು ತಮ್ಮ ಧರ್ಮಜ್ಞಾನವನ್ನು ಈ ಕಾವ್ಯಗಂಗೆಯಲ್ಲಿ ಸಂಗಮ ಮಾಡಿದ್ದಾರೆ; ಯಕ್ಷ, ನಹುಷ ಮೊದಲಾದವರು ಧರ್ಮದ ಪ್ರೌಢಪರೀಕ್ಷೆಯನ್ನು ನಡಸಿದ್ದಾರೆ. ಕಾವ್ಯದ ನಾಡಿ ನಾಡಿಯಲ್ಲಿಯೂ ಧರ್ಮರಸ ಹರಿಯುತ್ತಿದೆ. ಆದರೂ ಇದು ಬರಿಯ ಧರ್ಮಗ್ರಂಥವಲ್ಲ; ಒಂದು ಇತಿಹಾಸ. ಇದು ಭರತಖಂಡದ ಒಂದು ಕಾಲದ ನಾಗರಿಕತೆ ಸಂಸ್ಕೃತಿಗಳನ್ನು ಒಳಗೊಂಡು ಸಮಗ್ರ ಜನಜೀವನವನ್ನು ಅದ್ಭುತರೀತಿಯಲ್ಲಿ ವಿವರಿಸುತ್ತದೆ. ಇದನ್ನು ಹೇಳುತ್ತಿರುವ ವ್ಯಾಸಮಹರ್ಷಿ ಕುರುವಂಶ

ಅಳಿದು ಹೋಗುತ್ತಿದ್ದಾಗ, ಅದಕ್ಕೆ ಜೀವಕಳೆ ಕೊಟ್ಟವನು. ಒಂದು ದೃಷ್ಟಿಯಿಂದ ಮೂಲಪುರುಷನಾಗಿದ್ದುಕೊಂಡು, ಆ ವಂಶದ ಮೂರು ತಲೆ ಮಾರುಗಳ ಬಾಳು ಅಳಿವುಗಳನ್ನು ಕಣ್ಣಾರ ಕಂಡವನು. ಉತ್ತಮ ಇತಿಹಾಸಕಾರನಂತೆ ಸತ್ಯವನ್ನು ಸದಾ ದೃಷ್ಟಿಯಲ್ಲಿಟ್ಟುಕೊಂಡು, ಯಾವು ದೊಂದು ಪಕ್ಷವನ್ನೂ ವಹಿಸದೆ ಅನುಭವೈಕವೇದ್ಯವಾದುದನ್ನು ಕಾವ್ಯ ವಾಗಿ ಕಟ್ಟಿದ್ದಾನೆ; ಕೃತಕೃತ್ಯನಾಗಿದ್ದಾನೆ.

ರಾಮಾಯಣದ ಕವಿ ಆದಿಕವಿಯೆಂದು ಪ್ರಖ್ಯಾತನಾಗಿದ್ದರೂ– ಧರ್ಮ ಇತಿಹಾಸಗಳನ್ನು ಒಳಗೊಂಡ ಭಾರತ ಪುರಾಣವೆಂದು ಪರಿಗಣಿತ ವಾಗಿ, ಅದರ ಕರ್ತೃವಿಗೆ ಆದಿಕವಿಯ ಪಟ್ಟ ತಪ್ಪಿಹೋಗಿದ್ದರೂ ನ್ಯಾಯ ವಾಗಿ ಆ ಕೀರ್ತಿ ಭಾರತಕರ್ತೃವಿಗೇ ಸಲ್ಲಬೇಕು. ಭಾರತವು ರಾಮಾಯಣ ಕ್ಕಿಂತಲೂ ಪುರಾತನವಾದುದೆಂದು ಬಹುಜನರ ಹೇಳಿಕೆ. ಅಪೌರುಷೇಯ ಗಳೆಂದು ಪ್ರಖ್ಯಾತವಾಗಿರುವ ವೇದಗಳಲ್ಲಿ ಬೇರಿಟ್ಟು, ಜನರ ಬಾಯಿಂದ ಬಾಯಿಗೆ ವೇದಗಳಂತೆ ಹರಿದು ಬರುತ್ತಾ ಹತ್ತಾರು, ನೂರಾರು ಕೊಂಬೆ ಗಳನ್ನು ಒಳಗೊಂಡು ಬೆಳೆದು ನಿಂತಿದೆ, ಈ ಕಾವ್ಯ. ಗಾಯಕರಾದ ಕವಿಗಳು, ಶ್ರೋತೃಗಳ ಒಲವಿಗೆ ತಕ್ಕ ಹಾಗೆ ಇದನ್ನು ಬೆಳಸಿದರು. ಬೆಳೆದು ಬೆಳೆದು, ಒಂದು ಲಕ್ಷ ಶ್ಲೋಕಗಳನ್ನು ಒಳಗೊಂಡ ಮಹಾ ಕಾವ್ಯವಾಯಿತು.

ಬೃಹತ್ತು ಮಹತ್ತುಗಳೆರಡರಲ್ಲಿಯೂ ಭಾರತವನ್ನು ಮೀರಿರುವ ಕಾವ್ಯ ಇನ್ನೂ ಜಗತ್ತಿನಲ್ಲಿ ಉದಯವಾಗಿಲ್ಲ. ಈ ಕಾವ್ಯವಾರಿಧಿಯಿಂದ ದೊಡ್ಡ ಪುಟ್ಟ ನೂರಾರು ಕವಿಗಳು ತಮ್ಮ ಕಾವ್ಯಗಳಿಗೆ ವಸ್ತು ರತ್ನವನ್ನು ಆಯ್ದುಕೊಂಡಿದ್ದಾರೆ. ಎಷ್ಟು ಮೊಗೆದರೂ ಮುಗಿಯದಷ್ಟು ವಿಷಯ ಗಳನ್ನು ಒಳಗೊಂಡು ಪುಷ್ಟವಾಗಿರುವ ಮಹಾಕಾವ್ಯ ಅದು. ಹೀಗೆ ಜನಾನುರಾಗವನ್ನು ಗಳಿಸಿಕೊಂಡಿರುವುದರಲ್ಲಿ ಇದರೊಡನೆ ಸ್ಪರ್ಧಿಸಿರುವ ಕಾವ್ಯವೆಂದರೆ ರಾಮಾಯಣವೊಂದೇ. ಆದರೆ ರಾಮಾಯಣ, ಧರ್ಮ ಧೇನು ಇನ್ನೂ ಮೂರು ಕಾಲುಗಳನ್ನು ಊರಿ ನಿಂತಿದ್ದ ತ್ರೇತಾಯುಗಕ್ಕೆ ಸಂಬಂಧಿಸಿದುದು. ನಮ್ಮ ಯುಗಕ್ಕೆ ಅದು ಬಹುದೂರ. ಅದರಲ್ಲಿ ಕಂಡುಬರುವ ಆದರ್ಶ ಚಿತ್ರ 'ದೂರದ ಬೆಟ್ಟ, ಕಣ್ಣಿಗೆ ನುಣ್ಣಗೆ.' ಸುಲಭವಾಗಿ ಅನುಸರಣ ಸಾಧ್ಯವಲ್ಲ. ಆದರೆ ಭಾರತದ ವಿಚಾರ ಹಾಗಲ್ಲ. ಇಲ್ಲಿನ ಹಲವು ಪಾತ್ರಗಳು ನಮ್ಮ ಸಮೀಪ ಬಂಧುಗಳು. ಅವರ ಜೀವನ

ನಮ್ಮ ಜೀವನಕ್ಕೆ ಭೂತಕನ್ನಡಿ ಹಿಡಿದಂತೆ ಇದೆ. ಅವರು ಮಾನವ ಸಹಜವಾದ ಗುಣದೋಷಗಳಿಂದ ಕೂಡಿ ಸಜೀವ ವ್ಯಕ್ತಿಗಳಾಗಿ ತೋರುತ್ತಾರೆ. ರಾಮಾಯಣದ ಪಾತ್ರಗಳಿಗಿಂತಲೂ ಭಾರತದ ಪಾತ್ರಗಳು ಹೆಚ್ಚು ಅನುಸರಣಸಾಧ್ಯರೆಂದು ತೋರುತ್ತದೆ.

ಇಂಥ ಲೋಕಪ್ರಿಯವಾದ ಈ ಕಾವ್ಯವನ್ನು ನಮ್ಮವರು ಮಾತ್ರವೇ ಅಲ್ಲದೆ ಹೊರಗಿನವರೂ ಬಾಯಿತುಂಬ ಹೊಗಳಿದ್ದಾರೆ. ಅವರಲ್ಲಿ ಅಮೇರಿಕಾದೇಶದ ಪ್ರೊಫೆಸರ್ ಎ. ಆರ್. ಆರೆಂಜ್ ಎಂಬ ವಿದ್ವಾಂಸರು ತಮ್ಮ ದೇಶದ ಸಾಹಿತ್ಯದ ಇಂದಿನ ಅವನತಿಯನ್ನು ನೆನೆದು, ತಮ್ಮ ಉದ್ಧಾರಕ್ಕೆ ಭರತಖಂಡವೂ ಮಹಾಭಾರತವೂ ಶರಣ್ಯವೆಂದು ಹೇಳುತ್ತಾ ಮಹಾಭಾರತಕ್ಕೆ ಆತನು ಅರ್ಪಿಸಿರುವ ಪುಷ್ಪಾಂಜಲಿ ಇದು—'ಸಾಹಿತ್ಯದ ಮೂಲಕ ಸಂಸ್ಕೃತಿಯನ್ನು ಸೃಷ್ಟಿಮಾಡುವ ಪ್ರಯತ್ನಗಳಲ್ಲಿ ಮಹಾಭಾರತವು ಮಾನವ ಇತಿಹಾಸದಲ್ಲಿಯೇ ಏಕೈಕವೂ ಅತ್ಯಂತ ಮಹತ್ವಪೂರಿತವಾದುದೂ ಆಗಿದೆ. ಅದನ್ನು ರಚಿಸಿದ ಮಹಾಪುರುಷನ ಮೇಧಾಶಕ್ತಿಯನ್ನು ಅಳೆಯುವುದು ಯಾರಿಗಾದರೂ ಸುಲಭವಲ್ಲ. ಆ ಬುದ್ಧಿಶಕ್ತಿಯನ್ನು ಅರಿತುಕೊಳ್ಳಲು ಮಾಡುವ ಪ್ರಯತ್ನವೇ ಒಂದು ಉದಾರವಾದ ವಿದ್ಯಾಭ್ಯಾಸವಾದೀತು! ಅದರ ವಿಷಯಾನುಕ್ರಮಣಿಕೆಯ ಪರಿಚಯವೇ ಸಾಕು, ನಮ್ಮ ಪ್ರಾರ್ಥನಾ ದಿನದ ಯಾತ್ರೆಗಿಂತಲೂ ಹೆಚ್ಚು ಮಹತ್ವಪೂರಿತವಾದುದು. 'ಇಲಿಯಡ್,' 'ಒಡಿಸ್ಸಿ'ಗಳು ಅದರಲ್ಲಿನ ಉಪಕಥೆಗಳಿಗೆ ಸಮಾನ. ಜಗತ್ಪ್ರಸಿದ್ಧವಾದ ಭಗವದ್ಗೀತೆಯು, ಅದರಲ್ಲಿ ಬಂದಿರುವ ಅನೇಕ ಯುದ್ಧಗಳಲ್ಲಿ ನಡೆಯಲಿದ್ದ ಒಂದು ಯುದ್ಧದ ಪೂರ್ವಭಾವಿಯಾಗಿ ನಡಸಿದ ಒಂದು ಸಂಭಾಷಣೆ ಮಾತ್ರ. ನೂರಾರು ಪಾತ್ರಗಳು; ಘಟನೆಗಳ ಮೇಲೆ ಘಟನೆಗಳು; ಅವುಗಳಲ್ಲಿ ಅನಂತಕಾಲದ ವಿಶ್ವವ್ಯಾಪ್ತಿ. ಇಷ್ಟಾದರೂ ಒಂದೆಡೆಯಲ್ಲಿಯೂ ಕಾವ್ಯದ ರಚನೆ ಕುಂಟುವುದಿಲ್ಲ....ಅದನ್ನು ಬರಿಯ ಸಾಹಿತ್ಯವೆಂದೇ ಸ್ವೀಕರಿಸಿದರೂ, ಅದರ ಮಹತ್ತು ಬೃಹತ್ತುಗಳು ಅಸದೃಶವಾದುವುಗಳು. ಅದರಲ್ಲಿನ ಉದಾಹರಣೆಗಳೂ ಉಪದೇಶಗಳೂ ಕಾಲದಷ್ಟು ಅನಂತ ವಿಸ್ತಾರವಾಗಿ, ವಿಶ್ವತೋಮುಖವಾಗಿ ಬೆಳದಿವೆ. ಈಚಿನ ಕಾಲದ ಸಾಹಿತ್ಯಗ್ರಂಥಗಳನ್ನು ಓದುವುದರಲ್ಲಿ ಕಂಡು ಬರದ ವಾಸ್ತವಾನುಭವವು ಭಾರತಪಠನದಿಂದ ಉಂಟಾಗುತ್ತದೆ. ಇದರ ಪಠನದಿಂದ ಮಾನವನು

ಸತ್ಯಾನುಭವದಿಂದ ಹೇಗೋ ಹಾಗೆ ಬೇರೊಬ್ಬ ವ್ಯಕ್ತಿಯೇ ಆಗಿಹೋಗುತ್ತಾನೆ.' (ಕೂಡಲಿ ಶೃಂಗಗಿರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳ 'ವೇದವ್ಯಾಸರು' ಎಂಬ ಗ್ರಂಥದಿಂದ.)

## ೩. **ಕನ್ನಡ ಭಾರತಗಳು—**ಪಂಪ—ನಾರಣಪ್ಪ

ಸಂಸ್ಕೃತಭಾರತವು ಅನೇಕ ಕವಿಗಳಿಗೆ ಕಾವ್ಯವಸ್ತುವನ್ನು ಒದಗಿಸಿರುವುದು ಮಾತ್ರವೇ ಅಲ್ಲದೆ ಇಡೀ ಗ್ರಂಥವೇ ಭರತಖಂಡದ ಹಲವು ಭಾಷೆಗಳಿಗೆ ಪರಿವರ್ತಿತವಾಗಿದೆ ಕನ್ನಡದಲ್ಲಂತೂ ಸಾಹಿತ್ಯದ ಅರುಣೋದಯವಾಗಿರುವುದೇ ಭಾರತದ ಭಾಸ್ಕರಸಿಂದ. ಕನ್ನಡದ ಆದಿಕವಿ ಪಂಪ ರಚಿಸಿರುವ 'ವಿಕ್ರಮಾರ್ಜುನ ವಿಜಯ' ಅಥವಾ 'ಪಂಪ ಭಾರತ' ಕನ್ನಡ ಸಾಹಿತ್ಯದಲ್ಲಿ ಅದ್ವಿತೀಯವಾದ ಗ್ರಂಥ ಪಂಪನ ತರುವಾಯ ಗ್ರಂಥರಚನೆ ಮಾಡಿದವರೆಲ್ಲರೂ ಆತನನ್ನು ಮುಕ್ತಕಂಠದಿಂದ ಹೊಗಳಿದ್ದಾರೆ; ಭಕ್ತಿ ಕುಸುಮಾಂಜಲಿಯನ್ನು ಅರ್ಪಿಸಿದ್ದಾರೆ. ಆತನ ತರುವಾಯ ಭಾರತ ರಚನೆಯಿಂದ ಪ್ರಖ್ಯಾತನಾಗಿರುವ ಕವಿ ನಾರಣಪ್ಪ. ಈತ ವರಕವಿ. ಈ ಇಬ್ಬರೂ ಒಂದೊಂದು ದೃಷ್ಟಿಯಿಂದ ಅದ್ವಿತೀಯರು. ಪಂಪನು ಚಳುಕ್ಯ ವಂಶದ ಅರಿಕೇಸರಿಯ ಆಸ್ಥಾನಕವಿಯಾಗಿ, ದಂಡನಾಯಕನಾಗಿ, ಗೆಳೆಯನಾಗಿ ಬಾಳಿ ಬದುಕಿದನು. ಆತ ಬದುಕಿದ್ದುದು ಭಾರತದ ವೀರಯುಗದಲ್ಲಿ; ಕ್ಷತ್ರಿಯ ವೀರರ ಅಸ್ತ್ರಶಸ್ತ್ರಗಳ ಮಾರ್ಮೊಳಗಿನಿಂದ ಪ್ರಕ್ಷುಭಿತವಾಗಿದ್ದ ವಾತಾವರಣದಲ್ಲಿ. ಪಂಪನಿಗೆ ಕಂಠ ಹಿಡಿದರೆ ಕಾವ್ಯ, ಕತ್ತಿ ಹಿಡಿದರೆ ಕದನ ಸ್ವಾಭಾವಿಕವಾಗಿ ಹೋಗಿತ್ತು. ಆದ್ದರಿಂದ ಆತನ ಕಾವ್ಯದಲ್ಲಿ ವೀರರಸ ನೊರೆಗಟ್ಟಿ ಹರಿಯುತ್ತಿದೆ. ನಾರಣಪ್ಪನ ಸ್ವಭಾವ, ಸನ್ನಿವೇಶಗಳು ಬೇರೆ ಬಗೆಯವು. ಆತನ ಕಾಲ ಭಕ್ತಿಯುಗ. ಅನೇಕ ಶಿವಶರಣರ, ಹರಿದಾಸರ ಭಕ್ತಿ ಪ್ರವಾಹ ಉಕ್ಕಿ, ನಾಡಿನ ಮೂಲೆ ಮೂಲೆಯಲ್ಲಿಯೂ ಪ್ರವಹಿಸುತ್ತಿದ್ದ ಕಾಲ. ನಾರಣಪ್ಪನೋ ಯಾವ ರಾಜನ ಆಶ್ರಯವೂ ಇಲ್ಲದ ಒಬ್ಬ ಬಡವ. ಹೆಚ್ಚೆಂದರೆ ಒಬ್ಬ ಶಾನುಭೋಗನಾಗಿದ್ದಿರಬಹುದು. ಆತನ ಕಾವ್ಯರಚನೆಗೆ ಪ್ರೇರಕ ಶಕ್ತಿ ಗದುಗಿನ ವೀರನಾರಾಯಣ. ಆದ್ದರಿಂದ ಈತನ ಭಾರತದಲ್ಲಿ ಭಕ್ತಿ ಭಾವವು ಎಲ್ಲೆಲ್ಲಿಯೂ ತಾನೇ ತಾನಾಗಿ ತಾಂಡವವಾಡುತ್ತಿದೆ.

ಪಂಪ–ನಾರಣಪ್ಪ ಇವರ ಕಾವ್ಯದ ಸೊಬಗು ಬೇರೆ ಬೇರೆ ರೀತಿ

ಯುದು. ಪಂಪ ಕಾವ್ಯವನ್ನು ಬರೆದುದು ತನ್ನ ದೊರೆಯ ಮೆಚ್ಚಿಗೆ ಗಾಗಿ; ಆತನ ಆಸ್ಥಾನದ ಕವಿಗಳ ಮೆಚ್ಚಿಗೆಗಾಗಿ. ಆದ್ದರಿಂದ ಆತನ ಕಾವ್ಯ ಪ್ರೌಢವಾಗಿದೆ; ಪಂಡಿತಮಾನ್ಯವಾಗಿದೆ. ಆತನ ಕಾವ್ಯ ಸಮತಳ ಪ್ರದೇಶದಲ್ಲಿ ಹರಿಯುತ್ತಿರುವ ಪೂರ್ಣ ಪ್ರವಾಹದಂತೆ ಗಂಭೀರವಾದುದು. ನಾರಣಪ್ಪನ ಕಾವ್ಯ ಹಿಮಾಲಯ ಪ್ರದೇಶದಲ್ಲಿ ಪ್ರವಹಿಸುತ್ತಿರುವ ಬ್ರಹ್ಮ ಪುತ್ರಾ ನದಿಯಂತೆ. ಬೆಟ್ಟವನ್ನು ಹತ್ತಿ, ಪ್ರಪಾತಕ್ಕೆ ಧುಮ್ಮಿಕ್ಕಿ ಭೋರ್ಗರೆ ಯುತ್ತಾ ಪ್ರವಹಿಸುವುದು. ಪಂಪ ತನ್ನ ಕಾವ್ಯಕ್ಕೆ ಅಲಂಕಾರ, ಛಂದಸ್ಸು ವ್ಯಾಕರಣಗಳ ಕಡಿವಾಣವಿಕ್ಕಿ ಹೆದ್ದಾರಿಯಲ್ಲಿ ನಡಸುತ್ತಿದ್ದರೆ, ನಾರಣಪ್ಪನ ಕವಿತಾಪಕ್ಷಿ ಸ್ವಚ್ಛಂದವಾಗಿ ಗಿರಿ ವನ ವಿಹಾರಗಳಲ್ಲಿ ಹಾರಿಹೋಗುತ್ತಿದೆ. ಪಂಪನ ಅಚ್ಚುಕಟ್ಟು, ನಾಗರಿಕತೆ ನಾರಣಪ್ಪನಲ್ಲಿ ಬರದು. ಈತನ ದೃಷ್ಟಿ ಜನಸಾಮಾನ್ಯರ ಮನೋರಂಜನೆ, ಉದ್ಧಾರ. ಇವರಿಗೆ ಅರ್ಥ ವಾಗುವಂತೆ ಇರುವುದಾದರೆ ಕಾವ್ಯನಿಯಮಗಳು ಹಾರಿಹೋದರೂ ಈತನಿಗೇನೂ ವ್ಯಥೆಯಿಲ್ಲ. ಆದುದರಿಂದ ಈತನು ಪಂಡಿತರಲ್ಲಿ ಪಂಪ ನಷ್ಟು ಪ್ರಸಿದ್ಧನಾಗಿಲ್ಲ. ಆದರೆ ಪಂಪನಿಗೆ ನಾರಣಪ್ಪನಿಗೆ ದೊರೆತ ಜನ ಪ್ರಿಯತೆ ದೊರೆಯಲಿಲ್ಲ. ಸೀರಿಳಿಯದ ಜನಸಾಮಾನ್ಯರ ಗಂಟಲಿನಲ್ಲಿ ಪಂಪಭಾರತದ ಕಡುಬು ಹೇಗೆ ಇಳಿಯುವುದು ಸಾಧ್ಯ?

ಕನ್ನಡ ಸಾಹಿತ್ಯದ ಈ ಇಬ್ಬರು ಮಹಾ ಕವಿಗಳಲ್ಲಿ ಇರುವ ಮತ್ತೊಂದು ದೊಡ್ಡ ವ್ಯತ್ಯಾಸವೆಂದರೆ ಇವರು ಮೂಲವನ್ನು ಬಳಸಿ ಕೊಂಡಿರುವ ರೀತಿ. ಇಬ್ಬರಿಗೂ ಮೂಲ ಸಂಸ್ಕೃತ ಭಾರತವೇ ಆದರೂ, ಅದರ ಸಂಗ್ರಹ ಕಾರ್ಯದಲ್ಲಿಯೇ ತೊಡಗಿರುವವರಾದರೂ, ಅವರಿಬ್ಬರ ದೃಷ್ಟಿಕೋನದಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಪಂಪ ಜೈನಧರ್ಮಕ್ಕೆ ಸೇರಿದವನು. ಭಾರತದಲ್ಲಿರುವ ಹಲವು ಘಟನೆಗಳು ಆತನ ಅಭಿರುಚಿಗೆ ಹೊಂದಿಕೊಳ್ಳಲಿಲ್ಲ. ಅಲ್ಲದೆ ಆತನು ಬರೆಯುತ್ತಿದ್ದುದು ಬರಿಯ ಭಾರತ ವಲ್ಲ; ಸಮಸ್ತಭಾರತ. ತನ್ನ ರಾಜನಾದ ಅರಿಕೇಸರಿಯನ್ನು, ಅರ್ಜುನ ನಲ್ಲಿ ಅಭೇದ ಭಾವವನ್ನು ಕಲ್ಪಿಸಿ, ಕಥಾನಾಯಕನನ್ನಾಗಿ ಮಾಡಿಕೊಂಡು ತನ್ನ ಕಾವ್ಯವನ್ನು ಸೃಷ್ಟಿಸಿದ. ತನ್ನ ಪೋಷಕನ ಬಿರುದನ್ನೇ ಕಾವ್ಯದ ಹೆಸರಿಗೆ ಬಳಸಿಕೊಂಡು ಅದನ್ನು 'ವಿಕ್ರಮಾರ್ಜುನ ವಿಜಯ' ಎಂದು ಕರೆದ. 'ಪಂಚವಲ್ಲಭೆ' ದ್ರೌಪದಿಯನ್ನು ಅರ್ಜುನನ ಧರ್ಮಪತ್ನಿ ಯನ್ನಾಗಿ ಮಾತ್ರ ಸ್ವೀಕರಿಸಿದ. ಜೈನ ಪುರಾಣಗಳ ಪ್ರಕಾರ ನರಕಕ್ಕೆ

ಬಿದ್ದುಹೋಗುವ ಕೃಷ್ಣನನ್ನು ಮೂಲದಲ್ಲಿ ಮುಡಿಪಾಗಿಟ್ಟಿದ್ದ ದೇವ ಸಿಂಹಾಸನದಿಂದ ಕೆಳಕ್ಕಿಳಿದ. ಆತನ ಮಹಿಮೆ ಮಾಯೆಗಳೂ, ಗರಿಮೆ ಹಿರಿಮೆಗಳೂ ಬಂದಕಡೆ ಅವನ್ನು ಮೆಲ್ಲಗೆ ತೇಲಿಸಿಕೊಂಡು ಹೋದ. ಹೀಗೆ ಆತನು ಮಾಡಿಕೊಂಡ ಬದಲಾವಣೆಗಳು ನಿರ್ದುಷ್ಟವಾಗಿವೆ ಯೆಂದಾಗಲೀ, ಯಶಸ್ವಿಯಾಗಿ ನಿರ್ವಹಣಹೊಂದಿವೆಯೆಂದಾಗಲೀ ಹೇಳು ವಂತೆಯೇನೂ ಇಲ್ಲ. ಆದರೆ ಕಾವ್ಯದಲ್ಲಿ ಆತನ ಒಲವು ಎತ್ತ ಬಾಗಿದೆ ಯೆಂಬುದು ಇವುಗಳಿಂದ ಸ್ಪಷ್ಟವಾಗಿ ಗೋಚರವಾಗುತ್ತದೆ. ನಾರಣಪ್ಪನ ನೋಟ ಇದರಿಂದ ಭಿನ್ನವಾದುದು. ಆತನ ಕಾವ್ಯಕ್ಕೆ ಕಥಾನಾಯಕ ಶ್ರೀಕೃಷ್ಣ. ಭಗವಂತನ ಅವತಾರವಾದ ಆತ ಭೂಭಾರಹರಣಕ್ಕಾಗಿ ಟೊಂಕ ಕಟ್ಟಿದ್ದಾನೆ. ದುಷ್ಟಶಿಕ್ಷಣ, ಶಿಷ್ಟರಕ್ಷಣಕ್ಕಾಗಿ ಕಂಕಣಕಟ್ಟಿ ದ್ದಾನೆ. ಮಾನವನಂತೆ ವ್ಯವಹರಿಸುತ್ತಿದ್ದರೂ, ಆತನು ಭಗವಂತನೆಂಬ ಅರಿವು ಕಾವ್ಯದ ಎಲ್ಲ ಪಾತ್ರಗಳಿಗೂ ಇದೆ. ದುರ್ಯೋಧನನು ಕೂಡ ಆತನು ಭಗವಂತನೆಂದು ಬಲ್ಲ; ಆದರೂ ಆತನು ಹರಡಿರುವ ಮಾಯಾ ಜಾಲವನ್ನು ಹರಿಯಲು ಶಕ್ತನಾಗಿಲ್ಲ. ಅದಮ್ಯವಾದ, ಅಪರಿಹಾರ್ಯ ವಾದ ಲೀಲಾಸೂತ್ರದಲ್ಲಿ ಸಿಲುಕಿ, ಕಪಟನಾಟಕ ಸೂತ್ರಧಾರಿಯಾದ ಕೃಷ್ಣನು ಕುಣಿಸಿದಂತೆ ಕುಣಿಯುತ್ತಿದ್ದಾರೆ, ಎಲ್ಲರೂ.

'ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು' ಎನ್ನುವುದು ಪಂಪನ ಮನೋವೃತ್ತಿ. ಮಾತನಾಡಿದರೆಲ್ಲಿ ಮುತ್ತು ಸುರಿಯುವುದೋ ಎನ್ನುವ ಗಾಂಭೀರ್ಯ. ಮಾತುಗಳೆಲ್ಲವೂ ಸೂತ್ರದಂತೆ. ಎರಡು ಮಾತುಗಳಲ್ಲೇ ಒಂದು ದೊಡ್ಡ ಕಥೆಯನ್ನೆಲ್ಲಾ ಅಡಕಮಾಡಿಬಿಡುತ್ತಾನೆ. ನಾರಣಪ್ಪ ಹಾಗಲ್ಲ. ಹಿಗ್ಗಲಿಸುವುದು ಆತನ ಹುಟ್ಟುಗುಣ. ಪಂಪನು ಒಂದು ಪದ್ಯದಲ್ಲಿ ಹೇಳಿದ ಜರಾಸಂಧವಧೆ ಈತನ ಕೈಯ್ಯಲ್ಲಿ ೧೫೪ ಪದ್ಯಗಳ ಒಂದು ಸಂಧಿಯಾಗಿ ಪಸರಿಸಿದೆ. ಹತ್ತು ಹನ್ನೆರಡು ಪದ್ಯಗಳಲ್ಲಿ ಪಂಪನು ಅಡಕಮಾಡಿದ ಶಿಶುಪಾಲವಧೆಗೆ ನಾರಣಪ್ಪ ನಾಲ್ಕು ಸಂಧಿ ಗಳನ್ನೇ ಮೀಸಲಾಗಿಡುತ್ತಾನೆ. ಪಂಪನ ಕಾವ್ಯವನ್ನು ಓದುವಾಗ, ಓದುಗರು ಮೈಯೆಲ್ಲಾ ಕಣ್ಣಾಗಿ ಎಚ್ಚರಗೊಂಡಿರಬೇಕು; ನಿಂತು ನಿಂತು ಕಾವ್ಯರಸವನ್ನು ಚಪ್ಪರಿಸುತ್ತಾ ನಿಧಾನವಾಗಿ ಸಾಗಬೇಕು. ನಾರಣಪ್ಪ ನಲ್ಲಿ ಈ ಕಷ್ಟವಿಲ್ಲ. ಅರ್ಧ ಮೈ ಮರೆತು ಕೇಳುತ್ತಿದ್ದರೂ, ಕಥಾಸರಣಿ ಯನ್ನು ಅನುಸರಿಸಿಕೊಂಡು ಹೋಗಬಹುದು. ವಾಚಾಳಿಯಾದ ಈತ

ಅನೇಕವೇಳೆ ಮೇರೆಮೀರಿ ಉಛಾಯಿಸಿ ಮಾತಾಡುವುದೂ ಉಂಟು. ಇದರಿಂದ ಗಾಂಭೀರ್ಯಕ್ಕೆ ಲೋಪ ತರುವುದೂ ಉಂಟು. ಪಂಪ ತನ್ನ ಗಾಂಭೀರ್ಯಕ್ಕೆ ಎಲ್ಲಿಯೂ ಲಾಘವವನ್ನು ತಂದುಕೊಂಡಿಲ್ಲ.

ಪಂಪಕವಿ ತನ್ನ ಕಾವ್ಯ ಶಕ್ತಿಯನ್ನು ಎರಡು ಕವಲುಗಳಾಗಿ ಒಡೆದು ಪ್ರವಹಿಸಿದ. 'ಬೆಳಗುವೆನಿಲ್ಲಿ ಲೌಕಿಕಮುನ್' ಎಂದು ಭಾರತ ವನ್ನೂ, ಧರ್ಮಧ್ವಜವನ್ನು ಎತ್ತಿ ಹಿಡಿಯುವೆನೆಂದು 'ಆದಿ ಪುರಾಣ' ವನ್ನೂ ಬರೆದ. ಇದರಿಂದ ಕಾವ್ಯವನ್ನು ಮುಗಿಲು ಮುಟ್ಟಿಸಲು ಸಹಾಯಕವಾಗಿದ್ದ ಧರ್ಮದೃಷ್ಟಿ, ದರ್ಶನ ಆತನ ಭಾರತಕ್ಕೆ ದೊರೆಯ ದಂತಾಯಿತು. ಆತನ ಕಾವ್ಯಗಂಗೆ ತುಂಬುನೊರೆಯಿಂದ ಭೋರ್ಗರೆ ಯುತ್ತಾ ಪ್ರವಹಿಸುತ್ತಿದ್ದರೂ, ಮುಳುಗಿ ನೋಡಿದರೆ ಆಳ ಕಡಿಮೆ ಯೆಂಬಂತಾಯಿತು. ನಾರಣಪ್ಪ ತನ್ನ ಶಕ್ತಿ ಸರ್ವಸ್ವವನ್ನೂ ಒಂದು ಕಾವ್ಯ ಸೃಷ್ಟಿಗಾಗಿಯೇ ಮೀಸಲಾಗಿರಿಸಿದ. ಆತನ ಕಾವ್ಯಶಕ್ತಿಯೂ ಧರ್ಮಶಕ್ತಿಯೂ ಹುರಿಗೊಂಡೇ ಹೊರಹೊಮ್ಮಿದವು. ಇದರಿಂದ ಆತನ ಕಾವ್ಯ ಒಂದು ಅಲೌಕಿಕವಾದ ತೇಜಸ್ಸಿನಿಂದ ಬೆಳಗುವಂತಾಯಿತು. ಜೈನ ಮತದ ತತ್ವಗಳನ್ನು ಬೌದ್ಧಿಕವಾಗಿ ಒಪ್ಪಿದ ಪಂಪನಿಗೆ ಇದು ಪರಧರ್ಮದ ಕಾವ್ಯವೆಂಬ ದೃಷ್ಟಿ ಹುಟ್ಟದೆ ಹೋಗಿದ್ದರೆ—ಇದು ಬರಿಯ ಲೌಕಿಕ ಕಾವ್ಯವೆಂದು ಅಂದುಕೊಳ್ಳದಿದ್ದರೆ—ಆತನಿಗಿದ್ದ ಅದ್ಭುತ ಕವಿತಾಶಕ್ತಿ ಯಿಂದ ಅದೆಂತಹ ಮಹಾಕಾವ್ಯ ಉದಿಸುತ್ತಿತ್ತೊ! ಬಹುಶಃ ಮಿಲ್ಟನ್, ಡಾಂಟೆ, ಷೇಕ್ಸ್‌ಪಿಯರ್, ವ್ಯಾಸ ವಾಲ್ಮೀಕಿಗಳಂತೆ ಆತನೂ ವಿಶ್ವಸಾಹಿತಿ ಯಾಗುತ್ತಿದ್ದನೆಂದು ಕಾಣುತ್ತದೆ. ನಾರಣಪ್ಪನನ್ನು ಪಂಪ ಕವಿಯೊಡನೆ ಹೋಲಿಸುವಾಗ ಈ ಪ್ರಮುಖವಾದ ವ್ಯತ್ಯಾಸವನ್ನು ಮರೆಯಬಾರದು. ನಾರಣಪ್ಪ, ಭಕ್ತಿರಸಾವೇಶದಿಂದ ಮೈಮರೆತು ಮುಗಿಲು ಮುಟ್ಟುವಂತೆ ಬರೆದಿರುವ ಭಾಗಗಳಿಗೆ ಹೋಲಿಸಲು ಕನ್ನಡ ಸಾಹಿತ್ಯದಲ್ಲಿ ಮತ್ತೊಂದು ಕಾವ್ಯವಿಲ್ಲವೆಂದು ತೋರುತ್ತದೆ.

## ೪. ಇತರ ಭಾರತ ಕರ್ತೃಗಳು

ಪಂಪ-ನಾರಣಪ್ಪ ಈ ದಿವ್ಯ ಕವಿಗಳೇ ಅಲ್ಲದೆ, ಇತರ ಕವಿಗಳೂ ಕನ್ನಡ ಭಾರತದ ಸೃಷ್ಟಿಗೆ ಕೈಹಾಕಿದ್ದಾರೆ. ಪಂಪನು ತನ್ನ ವಿಕ್ರಮಾ ರ್ಜುನ ವಿಜಯದಲ್ಲಿ 'ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿಯ

ನೀಸುವೆಂ; ಕವಿ ವ್ಯಾಸನೆನೆಂಬ ಗರ್ವಮೆನಗಿಲ್ಲ' ಎಂದು ಹೇಳಿ ತನ
ಗಿಂತಲೂ ಹಿಂದೊಬ್ಬ 'ಕವಿವ್ಯಾಸ'ನಿದ್ದನೆಂದು ಸೂಚಿಸಿದ್ದಾನೆ. ಆದರೆ
ಪಂಪನ ಕಾವ್ಯ ಅದರ ಹಿಂದಿನ ಕಾವ್ಯಗಳನ್ನೆಲ್ಲಾ ಇಕ್ಕಿ ಮೆಟ್ಟಿದುದರಿಂದ
ಅವನಿಗಿಂತಲೂ ಹಿಂದೆ ಬರೆದಿದ್ದ ಭಾರತಗಳು ಹೇಳ ಹೆಸರಿಲ್ಲದಂತಾಗಿವೆ.

ಪಂಪ ನಾರಣಪ್ಪ–ಇವರ ಪ್ರತಿಭೆಯಿಂದ ಉದಿಸಿದ ಕಾವ್ಯಗಳ
ಕಾಂತಿಯಿಂದ ಇತರ ಭಾರತಗಳು ಮಂಕಾಗಿ ಹೋಗಿವೆ. ಕ್ರಿ. ಶ. ೧೫೦೦
ರಲ್ಲಿ ಚಾಟು ವಿಠಲನಾಥನು ಒಂದು ಭಾರತವನ್ನು ಬರೆದನೆಂದು ಪ್ರತೀತಿ
ಇದೆ. ಅದರಲ್ಲಿ ಪೌಲೋಮ, ಆಸ್ತಿಕ ಪರ್ವಗಳು ಮಾತ್ರ ಈಗ ಉಪ
ಲಬ್ಧವಾಗಿವೆ. ಕ್ರಿ. ಶ. ೧೫೫೦ರ ಸುಮಾರಿನಲ್ಲಿ, ಸುಕುಮಾರ ಭಾರತಿ
'ಚಾಯಣ ಭಾರತ'ವೆಂಬ ಒಂದು ಭಾರತವನ್ನು ಬರೆದಿರುವಂತೆ
ಗೊತ್ತಾಗುತ್ತದೆ. ಆದರೆ ಅದರಲ್ಲಿ ಎರಡು ಆಶ್ವಾಸಗಳು ಮಾತ್ರ ಅರೆ
ಜೀವದಿಂದ ಉಳಿದುಕೊಂಡಿವೆ. ನಾರಣಪ್ಪನು ಬರೆಯದೆ ಬಿಟ್ಟ ಉತ್ತರ
ಭಾಗವನ್ನು (ಶಾಂತಿಪರ್ವದಿಂದ ಮುಂದಿನ ಏಳು ಪರ್ವಗಳನ್ನು) ವಿಜಯ
ನಗರದ ಕೃಷ್ಣದೇವರಾಯನ ಅಪ್ಪಣೆಯಂತೆ ತಿಮ್ಮಣ್ಣ ಕವಿ (ಕ್ರಿ. ಶ.
೧೫೧೫) ರಚಿಸಿದ್ದಾನೆ. ಶ್ರೀನಿವಾಸಕವಿ (ಕ್ರಿ. ಶ. ೧೭೦೦) ಭಾರತದ
ಸ್ತ್ರೀ ಪರ್ವವನ್ನೂ, ಲಕ್ಷ್ಮಕವಿ (ಕ್ರಿ. ಶ. ೧೭೨೧) ಕರ್ಣಪರ್ವದಲ್ಲಿ
ನಾಲ್ಕು ಸಂಧಿಗಳು ಸೇರಿ ಮೊದಲ ಎಂಟು ಪರ್ವಗಳನ್ನೂ, ಪರಮದೇವ
(ಕ್ರಿ. ಶ. ೧೭೧೧) 'ತುರಂಗ ಭಾರತ' ವನ್ನೂ ರಚಿಸಿದರು. 'ಚಿತ್ರಭಾರತ'
ವೆಂಬ ಭಾರತವೂ ಕಳಲೆ ನಂಜರಾಜನು ಬರೆದಿರುವನೆಂದು ಪ್ರತೀತಿ
ಇರುವ ಭಾರತವೂ ಉಪಲಬ್ಧವಾಗಿಲ್ಲ.

ಮೇಲೆ ಹೇಳಿದ ಭಾರತಗಳೆಲ್ಲವೂ ಪದ್ಯ ರೂಪದಲ್ಲಿವೆ. ಇವು
ಗಳಲ್ಲದೆ ಚಿಕ್ಕದೇವರಾಜ ಭಾರತವೆಂಬ ಉತ್ತರಪರ್ವಗಳ ಟೀಕೆಯನ್ನು
ಒಳಗೊಂಡ ಭಾರತವೂ, ಜಕ್ಕಭೂಪಾಲನ (ಕ್ರಿ.ಶ. ೧೬೨೦) 'ಭಾರತ
ಕಥಾಸಂಗ್ರಹ' ವೂ ಮಧ್ವಗುರು ರಚಿತವಾದ ಭಾರತ ತಾತ್ಪರ್ಯನಿರ್ಣ
ಯಕ್ಕೆ ವಾದಿರಾಜರು (ಕ್ರಿ.ಶ. ೧೫೭೦) ಬರೆದಿರುವ ಕನ್ನಡ ವ್ಯಾಖ್ಯಾನವೂ
ಮುಮ್ಮಡಿ ಕೃಷ್ಣರಾಜ ಒಡೆಯರು (ಕ್ರಿ. ಶ. ೧೭೯೪-೧೮೬೮) ಬರೆದಿರುವ
'ಕೃಷ್ಣರಾಜ ವಾಣೀವಿಲಾಸ ಭಾರತ'ವೂ ಗದ್ಯಗ್ರಂಥಗಳಾಗಿವೆ. ಇವು
ಗಳಲ್ಲಿ 'ಕೃಷ್ಣರಾಜ ವಾಣಿವಿಲಾಸ ಭಾರತ'ವು ಸರ್ವ ಜನಾದರಣೀಯ
ವಾದುದು ; ಸಂಸ್ಕೃತ ಭಾರತವನ್ನು ಆದ್ಯಂತವಾಗಿ ಕನ್ನಡಿಸತಕ್ಕದ್ದು

ಸರಳವಾದ ಕನ್ನಡದಲ್ಲಿ ಮತ್ತಾವ ಭಾರತವೂ ಇಷ್ಟು ವಿಸ್ತಾರವಾಗಿ ಬರೆಯಲ್ಪಟ್ಟಿಲ್ಲ.

ವೈದಿಕ ಪಂಥದವರು ಬರೆದಿರುವ ಕಥೆಯನ್ನು ಕೆಲವು ಜೈನ ಕವಿಗಳು ಅಲ್ಲಲ್ಲಿ ಹಲವು ವ್ಯತ್ಯಾಸಗಳನ್ನು ಮಾಡಿ ಬಳಸಿ ಕೊಂಡಿದ್ದಾರೆ. ಅಂತಹವುಗಳಲ್ಲಿ ಸಾಳ್ವನು (ಕ್ರಿ.ಶ. ೧೫೫೦) ಬರೆದಿರುವ ಭಾರತ ಬಹಳ ಪ್ರಸಿದ್ಧವಾದುದು. ಇದಲ್ಲದೆ 'ಜಿನ ಭಾರತ' ವೆಂಬ ಮತ್ತೊಂದು ಭಾರತವೂ ಇದೆ. ಆದರೆ ಇವು ಹೆಚ್ಚು ಜನಾನುರಾಗವನ್ನು ಸಂಪಾದಿಸಲು ಶಕ್ತವಾಗಿಲ್ಲ. ಸಂಪ್ರದಾಯಬದ್ಧವಾದ ಕಥೆಯಲ್ಲಿ ಮಾಡಿಕೊಂಡಿರುವ ಬದಲಾವಣೆಗಳು ಒಂದು ಬಗೆಯ ವಿಲಕ್ಷಣವಾದಂತಾಗಿವೆಯಲ್ಲದೆ ಕಲಾದೃಷ್ಟಿಯಿಂದಲೂ ಆ ಬದಲಾವಣೆಗಳು ಅಷ್ಟು ನಿರ್ದುಷ್ಟವಾಗಿವೆಯೆಂದು ಹೇಳುವಂತಿಲ್ಲ.

ಇವುಗಳಲ್ಲದೆ ಭೀಮ ದುರ್ಯೋಧನರ ಗದಾಯುದ್ಧವನ್ನು ವರ್ಣಿಸುವ ರನ್ನ ಮಹಾಕವಿಯ 'ಗದಾಯುದ್ಧಂ' ಕಿರಾತಾರ್ಜುನೀಯ ಪ್ರಸಂಗವನ್ನು ವರ್ಣಿಸುವ ಷಡಕ್ಷರಿಯ 'ಶಬರಶಂಕರ ವಿಲಾಸಂ' ಪಾಂಡವರ ಅಶ್ವಮೇಧಯಾಗವನ್ನು ವರ್ಣಿಸುವ ಲಕ್ಷ್ಮೀಶನ 'ಜೈಮಿನಿಭಾರತ' ಇವು ಪ್ರೌಢವೂ, ಆದರೂ ಜನಪ್ರಿಯವೂ ಆದ ಕಾವ್ಯಗಳಾಗಿವೆ.

ಭಾರತದ ಕಥಾಭಾಗವನ್ನು ವಸ್ತುವನ್ನಾಗಿ ಸ್ವೀಕರಿಸಿರುವ ನೂರಾರು ಕಾವ್ಯಗಳಿವೆ. ಅಲ್ಲದೆ ಕೃಷ್ಣನನ್ನು ಕಥಾನಾಯಕನನ್ನಾಗಿ ಆಯ್ದುಕೊಂಡು ಬರೆದಿರುವ ಕಾವ್ಯಗಳಲ್ಲೆಲ್ಲಾ ಭಾರತದ ಕಥೆ ಅಷ್ಟು ಇಷ್ಟು ಬರುವುದು ಅನಿವಾರ್ಯ. ಆದರೆ ಈ ಕಾವ್ಯಗಳಲ್ಲಿ ಯಾವುವೂ ಪಂಪ ನಾರಣಪ್ಪ ಇವರ ಕಾವ್ಯಗಳಿಗೆ ಸಮಾನವಾಗುವಂತಿಲ್ಲ. ಅವರಿಬ್ಬರೂ ಸೂರ್ಯಚಂದ್ರರಂತೆ ಕನ್ನಡಸಾಹಿತ್ಯಾಕಾಶದಲ್ಲಿ ಸ್ಥಾಯಿಯಾಗಿರುವರು.

## ೫. ಉದ್ಯೋಗಪರ್ವದ ಕಥೆ

ಪಾಂಡವರ ವನವಾಸ ಅಜ್ಞಾತವಾಸಗಳ ಅವಧಿ ಮುಗಿಯಿತು. ಉತ್ತರಗೋಗ್ರಹಣದಲ್ಲಿ ವಿಜಯವನ್ನು ಗಳಿಸಿದ ಅರ್ಜುನನ ಮೇಲೆ ವಿರಾಟರಾಯನಿಗೆ ಅತಿ ಮಮತೆ; ಆದ್ದರಿಂದ ಆತನ ಮಗನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಈ ಮಂಗಳಕಾರ್ಯಕ್ಕಾಗಿ ಪಾಂಡವರಲ್ಲಿ ಅಭಿಮಾನವುಳ್ಳ ಅರಸರೆಲ್ಲರೂ ವಿರಾಟನಗರಿಯಲ್ಲಿ

ನೆರೆದಿದ್ದರು. ಒಂದು ದಿನ ಶ್ರೀಕೃಷ್ಣನು ಅವರನ್ನು "ಪಾಂಡವರು ಕಪಟ ದ್ಯೂತದಿಂದ ಪಡಬಾರದ ಕಷ್ಟಗಳನ್ನು ಪಟ್ಟಿದ್ದಾರೆ. ಇವರಿಗೆ ಪುನಃ ರಾಜ್ಯದೊರೆಯುವುದು ಎಂದು? ಇವರ ಗತಿಯೇನು?" ಎಂದು ಪ್ರಶ್ನಿಸಿದನು. ಸ್ವಲ್ಪ ಚರ್ಚೆಯಾದ ಮೇಲೆ ಪ್ರಶ್ನಿಸಿದ ಪ್ರಭೃತಿಯೇ ಉತ್ತರವನ್ನೂ ಹೇಳಿದನು. ಯುದ್ಧಕ್ಕಾಗಿ ಸಕಲ ಸನ್ನಾಹಗಳನ್ನೂ ಸಿದ್ಧಮಾಡಿಕೊಳ್ಳಬೇಕು. ನಾಡಿನ ಸಕಲ ರಾಜರಲ್ಲಿಯೂ ಒತ್ತಾಸೆಯನ್ನು ಬೇಡಿ ಓಲೆಗಳನ್ನಟ್ಟಬೇಕು. ಆದರೆ ಇತ್ತ ರಾಜ್ಯಾರ್ಧವನ್ನು ಸಾಮದಿಂದ ಬೇಡುವುದಕ್ಕಾಗಿ ಕುರುರಾಜನಲ್ಲಿಗೆ ಯೋಗ್ಯರಾದವರನ್ನು ಕಳುಹಿಸಬೇಕು." ಕೃಷ್ಣನ ಈ ತೀರ್ಮಾನಕ್ಕೆ ಎಲ್ಲರೂ ಸಮ್ಮತಿಸಿದರು. ಶ್ರೀಕೃಷ್ಣನು ಪಾಂಡವರಿಗೆ ಕಾಲೋಚಿತವಾದ ಬುದ್ಧಿವಾದವನ್ನು ಹೇಳಿ, ನೆನೆದಾಗ ಬರುವೆನೆಂದು ಭರವಸೆಯಿತ್ತು, ದ್ವಾರಕೆಗೆ ಹೊರಟುಹೋದನು.

ಅತ್ತ ಕೌರವನು ಉದಿತೋದಿತರಾಗುತ್ತಿದ್ದ ಪಾಂಡವರನ್ನು ಕಂಡು, ಇನ್ನು ತಾನು ಮೈಮರೆತು ಕುಳಿತಿರುವುದು ಸರಿಯಲ್ಲವೆಂದುಕೊಂಡನು. ತನ್ನ ಆಪ್ತರೊಡನೆ ಮಂತ್ರಾಲೋಚನೆ ನಡಸಿ ಗುಪ್ತವಾಗಿ ಕೃಷ್ಣನನ್ನು ತನಗೆ ಅನುಕೂಲನನ್ನಾಗಿ ಮಾಡಿಕೊಳ್ಳಬೇಕೆಂದು ಬಗೆದು ದ್ವಾರಕಿಗೆ ಹೊರಟನು. ಗೂಢಚಾರರಿಂದ ಈ ಸುದ್ದಿಯು ಪಾಂಡವರಿಗೆ ಗೊತ್ತಾಯಿತು. ಧರ್ಮರಾಯನು ಉದ್ವಿಗ್ನನಾಗಿ ಒಡನೆಯೇ ಅರ್ಜುನನನ್ನೂ ಅದೇ ಕಾರ್ಯಕ್ಕಾಗಿ ಕೃಷ್ಣನ ಬಳಿಗೆ ಕಳುಹಿಸಿದನು. ಅರ್ಜುನನ ದೃಷ್ಟಿಯಲ್ಲಿ ಕೃಷ್ಣನು ಸಾಕ್ಷಾತ್ ಪರಮಾತ್ಮ; ಆತನಿರುವ ದ್ವಾರಕಿ ಮುಕ್ತಿಗೆ ತವರ್ಮನೆ. ಆದ್ದರಿಂದ ಅದನ್ನು ಕಂಡೊಡನೆಯೇ ಅನನ್ಯ ಭಕ್ತಿಯಿಂದ ಸ್ತೋತ್ರಮಾಡುತ್ತಾ ಅರಮನೆಯನ್ನು ಪ್ರವೇಶಿಸಿದನು. ಆ ವೇಳೆಯಲ್ಲಿ ಶ್ರೀಕೃಷ್ಣನು ನಿದ್ರಾಮುದ್ರಿತನಾಗಿದ್ದುದರಿಂದ ಆತನನ್ನು ಎಬ್ಬಿಸಲಾರದೆ ಭಕ್ತಿಯುತನಾಗಿ ಆತನ ಪಾದಗಳ ಬಳಿಯಲ್ಲಿ ಕೈಮುಗಿದುಕೊಂಡು ಕುಳಿತನು. ಮರುಕ್ಷಣದಲ್ಲಿಯೇ ದುರ್ಯೋಧನನೂ ಅಲ್ಲಿಗೆ ಬಂದು ಆತನ ತಲೆಯ ಬಳಿಯಲ್ಲಿ ಕುಳಿತನು. ಸ್ವಲ್ಪ ಹೊತ್ತಿನಲ್ಲಿಯೇ ಶ್ರೀಕೃಷ್ಣನು ಮೈಮುರಿದು ಮೇಲಕ್ಕೆದ್ದನು. ಮೊದಲು ಅರ್ಜುನನು ಕಣ್ಣಿಗೆ ಬಿದ್ದ. ತಿರುಗಿ ನೋಡಿದರೆ ತಲೆಯ ಕಡೆ ದುರ್ಯೋಧನ. ಇಬ್ಬರನ್ನೂ ಆದರೋಪಚಾರಗಳಿಂದ ಸತ್ಕರಿಸಿ "ಇಬ್ಬರು ರಾಜರೂ ಒಟ್ಟಿಗೆ ಬಂದಿರುವಿರಿ.

ಇದೇನಾಶ್ಚರ್ಯ! ನೀವು ಬಂದ ಕಾರ್ಯವೇನು?" ಎಂದು ಕೇಳಿದ. ಕುರುರಾಜನೇ ಆತನ ಪ್ರಶ್ನೆಗೆ ಉತ್ತರಕೊಟ್ಟ–"ಪಾಂಡವರಿಗೂ ನಮಗೂ ವೈಮನಸ್ಯವುಂಟಾಗಿದೆ. ರಾಜ್ಯಕ್ಕಾಗಿ ನಾವಿಬ್ಬರೂ ಕಾದುವವರಾಗಿದ್ದೇವೆ. ನಮ್ಮಿಬ್ಬರಿಗೂ ನೀವು ಸಹಾಯಕರಾಗಬೇಕು."

ದುರ್ಯೋಧನನ ಮಾತುಗಳನ್ನು ಕೇಳಿ ಶ್ರೀ ಕೃಷ್ಣನಿಗೆ ಸಹಿಸಲಿಲ್ಲ. "ಅಯ್ಯಾ, ಕೌರವೇಶ್ವರ! ಈ ಭೂರಮಣಿ ಯಾವನೊಬ್ಬ ರಾಜನೊಡನೆಯೂ ಒಕ್ಕತನವಿದ್ದು ಆತನೊಡನೆ ಸಹಗಮನ ಮಾಡಿದವಳಲ್ಲ. ಇದನ್ನು ಸ್ವಲ್ಪವೂ ವಿಚಾರಿಸದೆ ಈ ಭೂಮಿಯು ತಮ್ಮದೆಂದೇ ಭಾವಿಸಿದ ರಾಜರು ನರಕಕ್ಕೆ ಇಳಿದು ಹೋಗುತ್ತಾರೆ. ಈಗ ನೀವು ಯುದ್ಧ ಮಾಡಿದುದಾದರೆ ಚಂದ್ರ ಸೂರ್ಯರಿರುವವರೆಗೂ ನಿಮಗೆ ಅಪಕೀರ್ತಿ ತಪ್ಪಿದುದಲ್ಲ. ಟಗರುಗಳನ್ನು ಹುರಿದುಂಬಿಸಿ ಕಾಳಗಕ್ಕೆ ಬಿಡುವಂತೆ ನಿಮ್ಮನ್ನು ಹುರಿದುಂಬಿಸುತ್ತಿದ್ದಾರೆ, ನೀಚರಾದವರು. ನಿಮ್ಮನಿಮ್ಮಲ್ಲಿ ಜಗಳ ಬೇಡ. ನೀವು ನೀವು ಸುಖವಾಗಿ ಬದುಕಿರುವುದನ್ನು ಕಂಡರೆ ನನಗೆಷ್ಟೋ ಸಂತೋಷ" ಎಂದನು.

ದುರ್ಯೋಧನನು ಬಂದಿದ್ದುದು ಧರ್ಮಶ್ರವಣಕ್ಕಾಗಿ ಅಲ್ಲ; ಯುದ್ಧದಲ್ಲಿ ಸಹಾಯವನ್ನು ಕೋರುವುದಕ್ಕಾಗಿ. ಕೃಷ್ಣನಿಗೆ ಇದನ್ನು ಸ್ಪಷ್ಟಪಡಿಸಿದ. ಆಗ ಕೃಷ್ಣನು ಅರ್ಜುನನ ಮುಖವನ್ನು ನೋಡಿ "ಅಯ್ಯಾ ನೀನೇನು ಹೇಳುವೆ?" ಎಂದನು. ಅರ್ಜುನನು "ನಾನು ಹೇಳುವುದಿನ್ನೇನು? ದುರ್ಯೋಧನ ಹೇಳಿದುದೇ ನನ್ನ ಹೇಳಿಕೆ" ಎಂದ. ಕೃಷ್ಣನು ಒಬ್ಬನೇ ಇಬ್ಬರಿಗೂ ಸಹಾಯಕನಾಗುವುದು ಅಸಾಧ್ಯ. ಆದ್ದರಿಂದ ಅವರನ್ನು ಕುರಿತು "ನಾನು ಯುದ್ಧ ಮಾಡುವವನಲ್ಲ; ಬರಿಯ ಉಂಡಾಡಿ ಭಟ್ಟ; ನಾನೊಂದು ಕಡೆ. ನಮ್ಮ ಅಪರಿಮಿತ ಸೈನ್ಯ, ಸೇನಾನಿಗಳು ಇನ್ನೊಂದು ಕಡೆ. ಇದರಲ್ಲಿ ನಿಮಗೆ ಬೇಕಾದುದನ್ನು ನೀವು ಆರಿಸಿಕೊಳ್ಳಬಹುದು. ಅರ್ಜುನಾ! ನೀನು ಚಿಕ್ಕವನು. ಆದುದರಿಂದ ಮೊದಲು ನಿನ್ನ ಸರತಿ. ಬೇಕಾದುದನ್ನು ಆಯ್ದುಕೋ" ಎಂದ. ಅರ್ಜುನನು "ನಾವು ಅಡವಿಯ ತಿರುಕರು. ಇಷ್ಟು ಸೈನ್ಯವನ್ನು ಸಂತೈಸುವುದು ಸಾಧ್ಯವಿಲ್ಲ. ನೀನೊಬ್ಬನೇ ನಮಗೆ ಸಾಕು. ಸಿರಿವಂತನಾದ ಕೌರವರಾಯನೇ ನಿನ್ನ ಸೈನ್ಯವನ್ನೆಲ್ಲಾ ಸ್ವೀಕರಿಸಲಿ" ಎಂದನು. ದುರ್ಯೋಧನನೂ ಇದಕ್ಕೆ ಒಪ್ಪಿ ಸಂತೋಷದಿಂದ ಹಿಂದಿರುಗಿದನು.

ಅತ್ತ ದುರ್ಯೋಧನನು ಹೋಗುತ್ತಲೇ ಇತ್ತ ಶ್ರೀಕೃಷ್ಣನು ಅರ್ಜುನನನ್ನು ಕುರಿತು "ಏನಯ್ಯಾ, ಕತ್ತಿಯನ್ನು ಬಿಸುಟು ಒರೆಯನ್ನು ಅಂಗೀಕರಿಸಿದೆಯಲ್ಲಾ! ಕಾದುವಂತಿಲ್ಲ ಕಟ್ಟುವಂತಿಲ್ಲ, ಇಂತಹವನನ್ನು ಸ್ವೀಕರಿಸಿದೆಯಲ್ಲಾ, ನೀನೆಂತಹ ದಡ್ಡ" ಎಂದು ಹಾಸ್ಯಮಾಡಿದನು. ಅರ್ಜುನನೂ ನಗುತ್ತಾ "ನಿಮ್ಮ ಗರುಡಿಯಲ್ಲಿ ನನಗೂ ಸ್ವಲ್ಪ ಪರಿಶ್ರಮ ವಿದೆ. ನಾನು ತಮ್ಮ ಪಟ್ಟ ಶಿಷ್ಯ'' ಎಂದನು. ಆಗ ಕೃಷ್ಣನು "ಅಯ್ಯಾ, ನೀವುಗಳು ನನ್ನನ್ನು ದೇವರೆಂದು ಕರೆಯುತ್ತೀರಿ; ಗೌರವಿ ಸುತ್ತೀರಿ. ನಮಗೆ ಗೊತ್ತಿದೆ, ನಮ್ಮಲ್ಲಿ ದೇವತನವೇನೂ ಇಲ್ಲ ವೆಂದು. ಈಗ ಹೇಳು ನಾವು ಬಂದು ಅಲ್ಲಿ ಏನು ಮಾಡಬೇಕು? ನಾವು ಪರರ ಹಂಗಿನಲ್ಲಿರುವುದನ್ನು ಸಹಿಸುವುದಿಲ್ಲ. ನಮಗೇನಾದರೂ ಒಂದು ಕೆಲಸವನ್ನು ವಹಿಸು'' ಎಂದನು. ಅರ್ಜುನನ ದೃಷ್ಟಿಯಲ್ಲಿ ಕೃಷ್ಣನು ಬರಿಯ ದೇವರಲ್ಲ; 'ದೇವರದೇವರೊಡೆಯ'. ಆದ್ದರಿಂದ ಆತ ನನ್ನು ಕುರತು "ನೀವು ನನ್ನ ಸಾರಥಿಯಾಗಿದ್ದುಕೊಂಡು ನಮ್ಮನ್ನು ಕಾಪಾಡಬೇಕು.'' ಎಂದು ಹೇಳಿ ಅಡ್ಡಬಿದ್ದನು. ಕೃಷ್ಣನು ಸಂತೋಷ ದಿಂದ ಆ ಕಾರ್ಯವನ್ನು ಸ್ವೀಕರಿಸಿ ಆತನೊಡನೆ ಪಾಂಡವರ ಬಳಿಗೆ ಹೊರಟುಬಂದನು.

ಪಾಂಡವ ಕೌರವರು ಪರಸ್ಪರ ಯುದ್ಧಕ್ಕೆ ಸಿದ್ಧರಾಗುತ್ತಿದ್ದರೂ ಸಂಧಿಯನ್ನು ಬೇಡಿ ಪಾಂಡವರು ಅಟ್ಟಿದ ಪುರೋಹಿತನೊಬ್ಬನು ಕೌರವ ರಿಂದ ತಿರಸ್ಕೃತನಾಗಿ ಹಿಂದಿರುಗಿದನು. ಅಷ್ಟೇ ಅಲ್ಲ. ಹಿಂದೆಯೇ ದುರ್ಯೋಧನನು ಸಂಜಯನೊಡನೆ ತನ್ನ ಅಭಿಪ್ರಾಯವನ್ನು ಪಾಂಡವ ರಿಗೆ ಸ್ಪಷ್ಟವಾಗಿ ಹೇಳಿಕಳುಹಿಸಿದನು—"ಸಂಗರದಲ್ಲಿ, ಅಸಿಧಾರೆಯಲ್ಲಿ ರಾಜ್ಯವನ್ನು ಕೊಡಬೇಕೇ ಹೊರತು ಹಾಗೆಯೇ ಕೊಟ್ಟರೆ ಅಧರ್ಮ ವಾದೀತು'' ಎಂದು. ಈ ಮಾತುಗಳನ್ನು ಕೇಳಿ ಪಾಂಡವ ಪಕ್ಷದವ ರೆಲ್ಲರೂ ಕಿಡಿಕಿಡಿಯಾದರು. ಧರ್ಮಜನೂ ಕೃಷ್ಣನೂ ಅವರನ್ನು ಸಮಾಧಾನಗೊಳಿಸಿ, ಸಂಜಯನನ್ನು ಮರ್ಯಾದೆಯಿಂದ ಪುರಸ್ಕರಿಸಿ, ಆತನನ್ನು ಬೀಳ್ಕೊಟ್ಟರು. ದುರ್ಯೋಧನನ ಹಟಮಾರಿತನಕ್ಕೆ ತಕ್ಕ ಫಲವು ಸನ್ನಿಹಿತವಾಗುತ್ತ ಬಂತು.

ಸಂಜಯನು ಅತ್ತ ಹೋಗುತ್ತಲೇ, ಇತ್ತ ಪಾಂಡವರು ಕೃಷ್ಣನ ಬಳಿಯಲ್ಲಿ ಮಂತ್ರಾಲೋಚನೆಯನ್ನು ನಡಸಿದರು. ಈಗ ಪಾಂಡವರ

ಕರ್ತವ್ಯವೇನು? ಸಂಧಿಯೋ ಸಮರವೋ? ಕೃಷ್ಣನು ಪಾಂಡವರಲ್ಲಿ ಒಬ್ಬೊಬ್ಬರ ಅಭಿಪ್ರಾಯವನ್ನೂ ಕೇಳುತ್ತಾ ಬಂದನು. ಧರ್ಮರಾಯನಿಗೆ 'ಸೋದರರಲ್ಲಿ ಕಡಿದಾಡಿದರೆಂಬ ಅಪಕೀರ್ತಿ ತನಗೆ ಬರುವುದಲ್ಲಾ' ಎಂದು ಅಳುಕು. ಕೌರವನ ಕೈಯಲ್ಲಿ ಐದೂರುಗಳನ್ನು ಬಿಡಿಸಿಕೊಟ್ಟರೆ ತಮ್ಮೈವರಿಗೂ ಅಷ್ಟೇ ಸಾಕು ಎಂದು ಆತನ ಮತ. ಈ ಅಭಿಪ್ರಾಯವನ್ನು ಕೇಳಿ ಕೃಷ್ಣನಿಗೆ 'ಇದೇನು ಹುಚ್ಚು' ಎನ್ನಿಸಿತು. ಭೀಮನನ್ನು ಪ್ರಶ್ನಿಸಿದ. ಆತನೂ ಅಣ್ಣನ ದಾರಿಯನ್ನೇ ಹಿಡಿಯಬೇಕೆ! ಕೃಷ್ಣನಿಗೆ ಕಕ್ಕಾಬಿಕ್ಕಿಯಾಯಿತು. 'ಹಾಲಾಹಲವು ಅಮೃತವಾದಂತೆ, ದುಳ್ಳುರಿ ಶೀತಳವಾದಂತೆ, ಈ ಭೀಮನು ಸಂಧಿಗೆ ಒಲಿದನಲ್ಲಾ'! ಎಂದುಕೊಂಡು "ಕುಂತಿಯ ಹೊಟ್ಟೆಯಲ್ಲಿ ಒಳ್ಳೆಯ ಸತ್ಪುತ್ರ ಹುಟ್ಟಿದೆಯಯ್ಯಾ" ಎಂದನು. ಅರ್ಜುನ ನಕುಲರೂ ತಮ್ಮ ಅಣ್ಣಂದಿರನ್ನೇ ಅನುಸರಿಸಿದರು. ಸಹದೇವನೊಬ್ಬನು ಮಾತ್ರ ಯುದ್ಧವನ್ನು ನಿಶ್ಚಯಿಸಿದ. "ದೇವ, ನನಗೆ ಸಂಧಿ ಸೇರದು. ಸಂಗರವೇ ಸಮ್ಮತ" ಎಂದು ಸ್ಪಷ್ಟವಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದ. ಅನಂತರ ಶ್ರೀ ಕೃಷ್ಣನು ದ್ರೌಪದಿಯ ಅಭಿಪ್ರಾಯವನ್ನು ಅರಿಯುವುದಕ್ಕಾಗಿ ಆಕೆಗೆ ಹೇಳಿಕಳುಹಿಸಿದ. ಕರೆಯಲು ಬಂದ ಆಳಿನಿಂದ ಆಕೆಗೆ ತನ್ನ ಪತಿಗಳ ಅಭಿಪ್ರಾಯ ತಿಳಿಯಿತು. ಕೌರವರೊಡನೆ ಸಂಧಾನವೆಂಬುದನ್ನು ಕೇಳಿ ಅವಳು ಕಿಡಿಕಿಡಿಯಾದಳು. ಪಾಪಿಗಳಾದ ತನ್ನ ಪತಿಗಳು ತನ್ನನ್ನು ಕೈಬಿಟ್ಟರು. ಶ್ರೀಕೃಷ್ಣನೂ ಇದಕ್ಕೆ ಒಪ್ಪಿ ಬಿಟ್ಟರೆ ತನ್ನ ದುಃಖಕ್ಕೆ ಪಾರವಿಲ್ಲವೆಂದುಕೊಂಡು ಹೊರಟು ಬಂದಳು. ಸಭಾಂಗಣವನ್ನು ಪ್ರವೇಶಿಸುತ್ತಿದ್ದಂತೆಯೇ ಭೀಮನನ್ನು ಛೀಗುಟ್ಟುವುದಕ್ಕೆ ಮೊದಲು ಮಾಡಿದಳು. "ಎಲೈ ವಾಯುಕುಮಾರನೇ, ಸಂಧಾನಕ್ಕೆ ಒಪ್ಪಿ ಪೌರುಷವನ್ನೆಲ್ಲಾ ನೀರಿನಲ್ಲಿ ಕಲಕಿಬಿಟ್ಟೆಯಾ? ಕೌರವೇಂದ್ರನ ಸೇವೆಯೇ ನಿನಗೆ ಅಭಿಮತವಾಗಿ ತೋರಿತಲ್ಲವೆ? ಅಯ್ಯೋ, ಈ ಸಂಧಿಯೆಂಬ ಮಾತಿನಿಂದ ಚಂದ್ರವಂಶವು ರಸಾತಲಕ್ಕೆ ಇಳಿದಂತಾಯಿತು. ಪಾಂಡವರೆಲ್ಲರೂ ರೋಷಚ್ಯುತರಾಗಿ, ಯತಿಗಳಾಗಿ ಹೋದರು. ಅವರ ಕ್ಷಾತ್ರತೇಜಸ್ಸು ಹೇಳ ಹೆಸರಿಲ್ಲದಂತಾಯಿತು. ಎಲೈ ಭೀಮಸೇನನೆ, ಒಮ್ಮೆ ನನ್ನ ಕಡೆ ಪ್ರೇಮದೃಷ್ಟಿಯನ್ನು ಬೀರು. ಲೋಕದಲ್ಲಿ ಹೆಂಡತಿಯ ಮಾನಸಂರಕ್ಷಣೆಗಿಂತಲೂ ಅಧಿಕವಾದ ಅಭಿಮಾನವಸ್ತುವಿಲ್ಲ. ಸಾಮಾನ್ಯ ಜನರು ಕೂಡ ಈ ಕಾರ್ಯಕ್ಕಾಗಿ

ಪ್ರಾಣದ ಹಂಗು ತೊರೆದು ಹೋರಾಡುವರು. ಇಂತಹುದರಲ್ಲಿ ನನಗೆ ಒಬ್ಬರಲ್ಲ, ಐವರು ಮಹಿಮಾಶಾಲಿಗಳಾದ ಗಂಡರಿದ್ದಾರೆ. ಏನು ಪ್ರಯೋಜನ? ಎಲೈ ಶ್ರೀಕೃಷ್ಣಸ್ವಾಮಿಯೇ, ಹಿಂದೆ ನನ್ನ ಮುಂದಲೆಯನ್ನು ಹಿಡಿದೆಳೆದು, ತುಂಬಿದ ಸಭೆಯಲ್ಲಿ ಅಪಮಾನಗೊಳಿಸಿದಾಗ ಈ ಪತಿಗಳೈವರೂ ಮೌನಧಾರಿಗಳಾಗಿಯೇ ಇದ್ದರು. ನೀನು ನನ್ನ ಮಾನವನ್ನು ಸಂರಕ್ಷಿಸಿದೆ. ಇಂದು ನೀನೂ ನನ್ನ ಕೈಬಿಡುತ್ತಿರುವೆ. ಹೋಗಲಿ, ಯಾರ ಹಂಗೂ ಬೇಡ. ನನ್ನ ಮಕ್ಕಳೂ, ನನ್ನ ತವರುಮನೆಯವರೂ ಹೋರಾಡಿ ನನ್ನನ್ನು ಸಂರಕ್ಷಿಸುವರು.'' ಎಂದಳು.

ದ್ರೌಪದಿಯ ಸಿಟ್ಟುಸಿರಿನ ಬಿರುಗಾಳಿ ಭೀಮನ ರೋಷವಹ್ನಿಯನ್ನು ಹೊತ್ತಿಸಿತು. ತುಟಿಗಳನ್ನು ಕಡಿಯುತ್ತಾ ಮೇಲಕ್ಕೆದ್ದು "ಎಲೈ ಹೆಣ್ಣೆ, ಸಮಾಧಾನ ಮಾಡಿಕೊ. ನೀನು ಸುರಿಸಿದ ಕಂಬನಿಗಳಿಗೆ ಶತಸಾವಿರಮಡಿಯಷ್ಟು ಕಣ್ಣೀರನ್ನು ಶತ್ರುಗಳ ಹೆಂಡಿರು ಸುರಿಸುವಂತೆ ಮಾಡುತ್ತೇನೆ.'' ಎಂದು ಹೇಳಿ ಕೃಷ್ಣನ ಕಡೆ ತಿರುಗಿದನು. ''ಎಲೈ ನರಕಮರ್ದನನೇ, ನನಗೆ ಸಂಧಿಯಲ್ಲಿ ಮನಸಿಲ್ಲ. ಸಮರವೇ ಸರ್ವಾರ್ಥ. ಇಗೋ, ಇದು ನನ್ನ ಪ್ರತಿಜ್ಞೆ—ಶತ್ರುವನ್ನು ನೆಲಕ್ಕೆ ಕೆಡವಿ ಆತನ ಕರುಳದಂಡೆಯನ್ನು ಈ ನನ್ನ ಮಡದಿಗೆ ಮುಡಿಸುತ್ತೇನೆ. ಆವನ ಸೋದರರ ರಕ್ತವನ್ನು ಶಾಕಿನಿಯರಿಗೆ ಯಥೇಷ್ಟವಾಗಿ ಕುಡಿಸುತ್ತೇನೆ. ನೀನು ಬೇಕಾದರೆ ಸಂಧಿಯನ್ನು ಮಾಡಿ ಈ ನಾಲ್ವರಿಗೂ ನಾಲ್ಕು ಊರುಗಳನ್ನು ಕೊಡಿಸು. ನನಗೆ ಕೌರವನ ಎರಡು ಊರು (ತೊಡೆ) ಗಳೇ ಸಾಕು." ಎಂದನು.

ಶ್ರೀ ಕೃಷ್ಣ ಬಲು ಚತುರ. ''ಏನಯ್ಯಾ, ನಿಮ್ಮ ನಿಮ್ಮಲ್ಲಿ ಒಂದು ನಿಶ್ಚಯವಿಲ್ಲದಿದ್ದರೆ ರಾಜಕಾರ್ಯವನ್ನು ನಡಸುವುದು ಹೇಗೆ? ಅಯ್ಯಾ ಧರ್ಮರಾಯ, ನೀನು ಹಿರಿಯ. ನೀನು ಮುಂದೆ ಏನು ಮಾಡಬೇಕೆಂಬುದನ್ನು ನಿಶ್ಚಯಿಸು." ಎಂದು ಹೇಳಿದ. ಧರ್ಮರಾಯ ಏನು ಹೇಳುತ್ತಾನೆ ಪಾಪ! ''ಏನು ಮಾಡಬೇಕೆಂಬುದು ನಿನಗೇ ಗೊತ್ತು. ನಮ್ಮ ಅಭ್ಯುದಯ ನಿನ್ನ ಅಧೀನ" ಎಂದನು. ಶ್ರೀಕೃಷ್ಣನು ಸಂಧಿಗಾಗಿ ಕೌರವನ ಬಳಿಗೆ ಹೋಗಬೇಕೆಂದೇ ನಿಶ್ಚಯವಾಯಿತು. ಆದರೆ ಹೋಗುವ ಮುನ್ನ ದ್ರೌಪದಿಯನ್ನು ಕುರಿತು "ತಾಯಿ, ಯುದ್ಧವನ್ನೇ ನಿಶ್ಚಯಿಸಿಕೊಂಡು ಬರುತ್ತೇನೆ. ಪಾಂಡವರು ಯುದ್ಧವನ್ನು

ತಿರಸ್ಕರಿಸಿದರೆ ನಾನು ನಿನ್ನ ಶತ್ರುಗಳನ್ನು ಸೀಳಿ ಅವರ ಕರುಳ ದಂಡೆ ಯನ್ನು ನಿನ್ನ ಕಬರಿಯಲ್ಲಿ ಮುಡಿಸುತ್ತೇನೆ. ನನ್ನ ತಂದೆತಾಯಿಗಳ ಮೇಲೆ ಆಣೆಯಿಟ್ಟು ಹೇಳುತ್ತೇನೆ; ನನ್ನ ಮಾತನ್ನು ನಂಬು" ಎಂದು ಹೇಳಿದನು. ರಾಜನೀತಿಜ್ಞನಾದ ಆತನಿಗೆ ಗೊತ್ತು—ಸಮರ ಅನಿವಾರ್ಯ ವೆಂದು.

ಶ್ರೀ ಕೃಷ್ಣನು ಕೌರವರಲ್ಲಿ ಸಂಧಿಗಾಗಿ ಬರುತ್ತಿರುವುದನ್ನು ಕೇಳಿ ಹಸ್ತಿನಾಪುರದಲ್ಲಿ ಕೇವಲ ಸಂಭ್ರಮ. ಹಲವರಿಗೆ ಆತನು ಪರಮಾತ್ಮ ನೆಂದು ಭಕ್ತಿ. ಉಳಿದವರು ಆತನ ಪ್ರತಿಭೆಗೆ ತಲೆಬಾಗಿದವರು. ಅಂತೂ ಎಲ್ಲರೂ ಆತನ ಬರವನ್ನು ಉತ್ಸಾಹದಿಂದ ಇದಿರು ನೋಡುತ್ತಿದ್ದರು. ಹಸ್ತಿನಾಪುರವೆಲ್ಲವೂ ಬಹುಸುಂದರವಾಗಿ ಅಲಂಕೃತವಾಯಿತು. ಪ್ರಮುಖ ರಾದವರೆಲ್ಲರೂ ತಮ್ಮ ಮನೆಗೆ ಶ್ರೀಕೃಷ್ಣನು ಬರುವನೆಂದು ಹಾರೈಸುತ್ತಾ ಸಕಲ ಸಂಭಾರಗಳನ್ನೂ ಸಿದ್ಧಗೊಳಿಸಿದ್ದರು. ಕೌರವನಂತೂ ತನ್ನ ಮನೆಗೆ ಆತನು ಬರದೆ ಇರುವುದೇ ಇಲ್ಲವೆಂದು ಸಾರವಸ್ತುಗಳನ್ನು ತರಿಸಿ ಆರೋಗಣೆಗೆ ಸಿದ್ಧಗೊಳಿಸಿದ್ದ. ಆದರೆ ಕೃಷ್ಣನು ತಲೆ ತಲೆಯಾದವರಾರ ಮನೆಯಲ್ಲಿಯೂ ಇಳಿದುಕೊಳ್ಳಲಿಲ್ಲ. ಕಡುಬಡವನಾದ ವಿದುರನ ಮನೆಗೆ ಹೋಗಿ ಇಳಿದುಕೊಂಡನು. ಇದರಿಂದ ಎಲ್ಲರಿಗೂ ಆಶಾಭಂಗವಾಯಿತು.

ವಿದುರನಿಗೆ ಶ್ರೀಕೃಷ್ಣಪರಮಾತ್ಮನು ತನ್ನ ಮನೆಗೆ ಬಂದನೆಂದು ಹಿಡಿಸಲಾರದಷ್ಟು ಆನಂದ. ಹುಚ್ಚನಂತೆ ತಕತಕ ಕುಣಿದಾಡಿಬಿಟ್ಟನು. ಶ್ರೀಕೃಷ್ಣನು ಆತನನ್ನು ಕೆಣಕಿ ಸ್ವಲ್ಪ ಕೀಟಲೆ ಮಾಡಿದ. "ಏನಯ್ಯಾ ವಿದುರ! ನಾವು ಹಸಿದು ಹೊಟ್ಟೆಗಾಗಿ ಹಾತುವರಿಯುತ್ತಾ ಕುಳಿತಿದ್ದರೆ ನೀನು ತಕತಕ ಕುಣಿದಾಡುತ್ತಿದ್ದೀಯಲ್ಲಾ! ಇದರಿಂದ ನಮ್ಮಹೊಟ್ಟೆಯ ಕುಣಿತ ನಿಲ್ಲುತ್ತದೆಯೆ? ರಾಜ ಮಹಾರಾಜರೆಲ್ಲಾ ಪ್ರಾರ್ಥಿಸುತ್ತಿದ್ದರೂ ಅದನ್ನು ತಿರಸ್ಕರಿಸಿ ನಿನ್ನ ಬಳಿಗೆ ಬಂದಿದ್ದೇವೆ'' ಎಂದನು. ಆದರೆ ವಿದುರನ ಮನೆಯಲ್ಲಿ ಏಕಾದಶಿ ಪ್ರತ್ಯಕ್ಷ. ಇಲ್ಲ ಎನ್ನದಂತೆ ಒಂದು ಲೋಟ ಹಾಲುಮಾತ್ರ ಇತ್ತು. ಆದನ್ನೇ ವಿದುರನು ಅರ್ಪಿಸಿದ; ಕೃಷ್ಣನು ಆದನ್ನೇ ಸ್ವೀಕರಿಸಿ ತೃಪ್ತಿಗೊಂಡ. ಅನಂತರ ಕೌರವನಿಗೆ, ಆತನನ್ನು ಕಾಣಲು ತಾನು ಇಚ್ಛಿಸುವುದಾಗಿ ವಿದುರನೊಡನೆ ಹೇಳಿ ಕಳುಹಿಸಿದ. ಕೃಷ್ಣನ ಚರ್ಯೆಯಿಂದ ಸಂತಪ್ತನಾಗಿದ್ದ ದುರ್ಯೋಧನನು "ಆತನು ಬಂದಿರುವುದಿನ್ನೇತಕ್ಕೆ? ಶತ್ರುಗಳಿಗೆ ಸಹಾಯಕವಾಗಿ ರಾಯಭಾರಕ್ಕೆ

ಬಂದಿರಬೇಕು, ಈ ದಿನ ಆಗುವುದಿಲ್ಲ ; ನಾಳೆ ಕಾಣಿಸಿಕೊಳ್ಳುತ್ತೇವೆ'' ಎಂದು ಪ್ರತ್ಯುತ್ತರ ಹೇಳಿಕಳುಹಿಸಿದ.

ಮರುದಿನ ಸುಯೋಧನನು ಅತ್ಯಂತ ಠೀವಿಯಿಂದ ತನ್ನ ಒಡ್ಡೋಲಗವನ್ನು ನೆರಹಿದನು. ಸಹೋದರರೂ ಸಂಬಂಧಿಗಳೂ ಮಂತ್ರಿಗಳೂ, ಸಾಮಂತರೂ ರತ್ನಖಚಿತವಾದ ಪೀಠಗಳನ್ನು ಅಲಂಕರಿಸಿ, ಕುಳಿತುಕೊಂಡರು. ಉನ್ನತವಾದ ರತ್ನ ಸಿಂಹಾಸನದ ಮೇಲೆ ಸಾರ್ವಭೌಮನಾದ ಸುಯೋಧನನು ಮಂಡಿಸಿದನು. ಇಕ್ಕೆಲದಲ್ಲಿಯೂ ಸುಂದರಿಯರಾದ ತರುಣಿಯರು ಚಾಮರವಿಕ್ಕುತ್ತಿದ್ದರು. ಆ ಸಮಯದಲ್ಲಿ ದುರ್ಯೋಧನನ ಅನುಮತಿಯಂತೆ ಶ್ರೀಕೃಷ್ಣನು ಸಭೆಯನ್ನು ಪ್ರವೇಶಿಸಿದನು. ಒಡನೆಯೇ ಭೀಷ್ಮ ದ್ರೋಣಾದಿಗಳು ಎದ್ದು ಬಂದು ಆತನನ್ನು ಕರೆತಂದರು. ಸಭೆಯಲ್ಲಿದ್ದವರೆಲ್ಲರೂ ಪೀಠಗಳಿಂದ ಮೇಲಕ್ಕೆದ್ದು ವಂದಿಸಿ ಶ್ರೀಕೃಷ್ಣನನ್ನು ಗೌರವಿಸಿದರು. ದುರ್ಯೋಧನನು ಮಾತ್ರ "ಇವನಾವ ಮಹಾ'' ಎಂದುಕೊಂಡು, ಕುಳಿತೇಇದ್ದನು. ಆದರೇನು ? ಮಹಿಮಾಪುರುಷನಾದ ಶ್ರೀಕೃಷ್ಣನ ಇದರಿನಲ್ಲಿ ಆತನ ಹೆಮ್ಮೆ ಎಲ್ಲಿ ನಡೆಯಬೇಕು? ಸಿಂಹಾಸನದ ಗೋಣಸು ಮುರಿದು, ಕೆಳಗೆ ಬಿದ್ದನು. ಶ್ರೀಕೃಷ್ಣನು ಕಾಲೋಚಿತವಾಗಿ ಆತನನ್ನು ಸಮಾಧಾನಪಡಿಸಿ ತನಗಾಗಿ ತೆರಪಾಗಿದ್ದ ಸಿಂಹಾಸನವನ್ನು ಏರಿ ಕುಳಿತನು.

ದುರ್ಯೋಧನನು ತನಗಾದ ಆಕಸ್ಮಿಕ ಅಪಮಾನದಿಂದ ನೊಂದು ಮ್ಲಾನವದನನಾಗಿದ್ದನು. ಆತನನ್ನು ಕುರಿತು ಶ್ರೀಕೃಷ್ಣನು "ಏನು ಭಾವನವರೇ, ಕುಶಲವೇ ? ಮುಖದ ಮೇಲೆ ದುಗುಡವೇಕೆ ?'' ಎಂದು ಪರಿಹಾಸಮಾಡಿದನು. ಅದಕ್ಕೆ ಸುಯೋಧನನು ಕಟುಪರಿಹಾಸದೊಡನೆ ಉತ್ತರ ಕೊಟ್ಟನು. "ಏನೋ ತಾವು ಬಿಜಯಮಾಡಿದಿರೆಂದು ಮಹಾ ವಿಲಾಸದಿಂದ ಷಡ್ರಸೋಪೇತವಾದ ಆಹಾರವನ್ನು ಸಿದ್ಧಗೊಳಿಸಿದೆ. ಆದರೆ ತಮಗೆ ನಮ್ಮಂತಹವರ ಸೇವೆ ಹೇಗೆ ಸರಿಹೋದೀತು ? ವಿದುರನ ಮನೆಯಲ್ಲಿ ಊಟ ಮಾಡಿದಿರಿ. ಗೋವಳಿಗತನ ಹೇಗೆ ಹೋದೀತು ? ಅತಿರಥ ಮಹಾರಥರಾದವರೆಲ್ಲಾ ತಮ್ಮ ಬರವಿಗಾಗಿ ಕಾದಿರುವಾಗ ತಾವು ತೊತ್ತಿನ ಮಗನ ಮನೆಯಲ್ಲಿ ಊಟಮಾಡುವುದು ನಿಮ್ಮ ಹಣೆಯ ಬರಹವಾಗಬೇಕೆ ? ನಿಮ್ಮ ಹುಟ್ಟು ಸ್ವಭಾವ ನೀವು ಹೇಗೆ ಬಿಟ್ಟೀರಿ ? ರಾಜಠೀವಿ ನಿಮಗೆ ಹೇಗೆ ಸರಿ ಹೋಗಬೇಕು, ಪಾಪ ! '' ಎಂದನು.

ಕೌರವನ ನುಡಿಗಳನ್ನು ಶ್ರೀಕೃಷ್ಣನೇನೋ ಸಹಿಸಿದನು. ಆದರೆ ವಿದುರನಿಗೆ ಅದನ್ನು ಸಹಿಸಲಾಗಲಿಲ್ಲ. ತುಂಬಿದ ಸಭೆಯಲ್ಲಿ ತನ್ನನ್ನು ಅಪಮಾನಗೊಳಿಸಿದುದಕ್ಕಾಗಿ ಆತನು ಕಿಡಿಕಿಡಿಯಾದನು. ಕೆಂಗಣ್ಣಿನಿಂದ ಕೌರವನನ್ನು ನೋಡುತ್ತಾ "ಎಲವೋ! ಭೀಮನು ಕೋಪದಿಂದ ನಿನ್ನ ತೊಡೆಗಳನ್ನು ಮುರಿಯುವಂದು ನಿನ್ನ ಸಂರಕ್ಷಣೆಗೆಂದು ಈ ಬಿಲ್ಲನ್ನು ಇರಿಸಿದ್ದೆ. ಇನ್ನು ನನಗೆ ನಿನ್ನ ಹಂಗೇನು?" ಎಂದು ಘರ್ಜಿಸುತ್ತ ತನ್ನ ಕೈಲಿದ್ದ ಧನುಸ್ಸನ್ನು ಮುರಿದು ನೆಲಕ್ಕೊಗೆದನು. ಇದನ್ನು ಕಂಡು ಕೌರವನ ಕಡೆಯವರೆಲ್ಲರೂ ತಲ್ಲಣಿಸಿಹೋದರು. ಅನಂತರ ಶ್ರೀಕೃಷ್ಣನು ಕೌರವನನ್ನು ಕುರಿತು "ಅಯ್ಯಾ ಕುರುರಾಜ! ಶತ್ರುಗಳ ಮನೆಯಲ್ಲಿ ಅನ್ನಪಾನಾದಿಗಳನ್ನು ಸ್ವೀಕರಿಸಬಾರದೆಂಬುದು ರಾಜನೀತಿ. ನೀನು ಪಾಂಡವರಿಗೆ ಪರಮಶತ್ರು. ಆ ಪಾಂಡವರು ನನ್ನ ಪ್ರಾಣಕ್ಕೆ ಸಮಾನರು. ಹೀಗಿರುವಲ್ಲಿ ನೀನು ನನ್ನ ಚರ್ಯೆಯನ್ನು ದೂರುವುದೆಂತು?" ಎಂದು ಹೇಳಿದನು. ಕೌರವನು ಅದಕ್ಕೆ ಪ್ರತ್ಯುತ್ತರವಾಗಿ "ನೀನು ಗೋಪೀಜಾರ. ಜಾರೆಯ ಮಕ್ಕಳಿಗೆಲ್ಲಾ ನೀನು ಜೀವ. ಆದರೊಳಗೇನು ತಪ್ಪು? ಅದಿರಲಿ, ನೀನು ಈಗ ಬಂದ ಕಾರ್ಯವೇನು?" ಎಂದನು.

ಶ್ರೀಕೃಷ್ಣನು ತಾನು ಬಂದ ಕಾರ್ಯವನ್ನು ಕೌರವನಲ್ಲಿ ಅರುಹಿದನು—'ಅಯ್ಯಾ ಸುಯೋಧನ, ಪಾಂಡವರು ನಿನ್ನವರು. ಅವರೊಡನೆ ಸ್ನೇಹದಿಂದ ಬಾಳುವುದು ನಿನಗೆ ಹಿತಕರ. ವನವಾಸದಿಂದ ಅವರು ನವೆದುಹೋಗಿದ್ದಾರೆ. ಅವರ ಭಾಗದ ಅರ್ಧ ರಾಜ್ಯವನ್ನು ಅವರಿಗೆ ಬಿಟ್ಟುಕೊಡು. ಈ ಬಾಳು ಅಶಾಶ್ವತ. ಕೀರ್ತಿ ಶಾಶ್ವತ. ನಾನು ಹೇಳುವ ಈ ಮಾತನ್ನು ನಿನ್ನ ಹಿರಿಯರೂ ಒಪ್ಪುತ್ತಾರೆ; ಸತ್ಪುರುಷರೆಲ್ಲರೂ ಒಪ್ಪುತ್ತಾರೆ.' ಆದರೆ ಈ ಸಾಮದ ನುಡಿಗಳು ಆತನ ಮನಸ್ಸನ್ನು ಹೊಗಲಿಲ್ಲ. ಗುರುಹಿರಿಯರು ಹೇಳಿದ ಬುದ್ಧಿವಾದವೂ ವ್ಯರ್ಥವಾಯಿತು. ಕಡೆಗೆ ಕೃಷ್ಣನು "ಅರ್ಧ ರಾಜ್ಯದ ಮಾತು ಹೋಗಲಿ. ಆ ಐವರಿಗೆ ಐದೂರುಗಳನ್ನಾದರೂ ಬಿಟ್ಟುಕೊಡು." ಎಂದು ಬೇಡಿದನು. ದುರ್ಯೋಧನನು ತನ್ನ ರಾಜ್ಯದಲ್ಲಿ ಮುಳ್ಳುಮೊನೆಯಷ್ಟನ್ನು ಕೂಡ ಬಿಟ್ಟುಕೊಡುವುದಿಲ್ಲವೆಂದು ಕಡಾಖಂಡಿತವಾಗಿ ಹೇಳಿಬಿಟ್ಟನು. ಇಷ್ಟೇ ಅಲ್ಲ, ಕೃಷ್ಣನನ್ನು ಪರಿಪರಿಯಾಗಿ ನಿಂದಿಸಿದನು. ಆತನನ್ನು ಹಿಡಿದು ಬಂಧಿಸುವುದಕ್ಕೆ ಕೂಡ ಪ್ರಯತ್ನಿಸಿದನು. ಆದರೆ ಮಹಿಮಾಪುರುಷನಾದ ಶ್ರೀಕೃಷ್ಣನು

ತೋರಿದ ವಿಶ್ವರೂಪದಿಂದ ಸಮಸ್ತರಿಗೂ ಆತನು ಪರಮಾತ್ಮ ಸ್ವರೂಪಿ ಯೆಂದು ಮನವರಿಕೆಯಾಗಿ ಹೋಯಿತು.

ಸಂಧಾನಕಾರ್ಯವು ಭಗ್ನವಾಗಿ ಹೋದುದರಿಂದ ಶ್ರೀಕೃಷ್ಣನು ಬಂದದಾರಿ ಹಿಡಿದು, ಸಂಧಿ ಮುರಿದುದನ್ನು ಕುಂತಿಗೆ ತಿಳಿಸಿದನು. "ನಿನ್ನ ಐವರು ಮಕ್ಕಳನ್ನು ತಲೆಗಾಯುವಂತೆ ನಿನ್ನ ಮಗನಾದ ಕರ್ಣ ನನ್ನು ಪ್ರಾರ್ಥಿಸು" ಎಂದು ಆಕೆಗೆ ಬುದ್ಧಿವಾದ ಹೇಳಿದನು. ಭೀಷ್ಮ ದ್ರೋಣಾದಿಗಳೆಲ್ಲರಿಂದಲೂ ಬೀಳ್ಕೊಂಡಾಯಿತು. ಕರ್ಣನನ್ನು ಮಾತ್ರ ಸ್ವಲ್ಪ ದೂರ ತನ್ನನ್ನು ಸಾಗಕಳುಹಲು ತನ್ನೊಡನೆ ಬರುವಂತೆ ಬೇಡಿ ದನು. ರಥದ ಹೊರಗಿದ್ದ ಆತನನ್ನು ಕೇವಲ ಸಲಿಗೆಯಿಂದ ಕೈಹಿಡಿದು ಒಳಕ್ಕೆ ಎಳೆದುಕೊಂಡನು. ಆತನ ತೊಡೆಗೆ ತನ್ನ ತೊಡೆ ಸೋಕುವಂತೆ ಕೇವಲ ಸಮೀಪದಲ್ಲಿ ಆತನನ್ನು ಕುಳ್ಳಿರಿಸಿಕೊಂಡನು. ಕರ್ಣನಿಗೆ ಕೃಷ್ಣನ ಈ ಬಗೆಯಾದ ಸಲಿಗೆ ಅರ್ಥವಾಗಲಿಲ್ಲ. ಸಮಸ್ತರಾಜರಿಂದಲೂ ಸನ್ಮಾನಿತನಾಗುತ್ತಿರುವ ಶ್ರೀಕೃಷ್ಣನೆಲ್ಲಿ, ಕೇವಲ ಶೂದ್ರನೆಂಬ ಅವಹೇಳ ನಕ್ಕೆ ಗುರಿಯಾದ ತಾನೆಲ್ಲಿ? ಆದ್ದರಿಂದ ಕೃಷ್ಣನನ್ನು ಕುರಿತು "ಸ್ವಾಮಿ, ತಮಗೆ ಸಮಾನನಂತೆ ವರ್ತಿಸುವ ಯೋಗ್ಯತೆ ನನಗೆಲ್ಲಿಯದು?" ಎಂದನು. ಈ ಮಾತುಗಳನ್ನು ಕೇಳಿ ಕೃಷ್ಣನು ಇನ್ನೂ ಸ್ವಲ್ಪ ಆತನ ಸಮೀಪಕ್ಕೆ ಸರಿದನು. ಅನಂತರ ಆತನನ್ನು ಕುರಿತು "ಎಲೈ ಕರ್ಣನೇ, ನಿಜವಾದ ಚಕ್ರವರ್ತಿ. ವಂಶದ ಏಳಿಗೆಯಲ್ಲಂತೂ ನೀನು ಸೂರ್ಯವಂಶಲಲಾಮ, ಶ್ರೀರಾಮಚಂದ್ರನಿಗೆ ಸಮಾನನಾದವನು. ನಿನ್ನ ಕುಲ ಗೌರವಗಳನ್ನರಿ ಯದೆ ದುರ್ಯೋಧನನಲ್ಲಿ ಸೇವಾವೃತ್ತಿಯನ್ನು ಕೈಕೊಂಡಿರುವೆ. ನಿಜ ವಾಗಿಯೂ ನೀನು ಪಾಂಡವರಲ್ಲಿ ಹಿರಿಯ. ಕುಂತಿದೇವಿ ದುರ್ವಾ ಸರಿಂದ ಪಡೆದ ಐದುಮಂತ್ರಗಳಲ್ಲಿ ಮೊದಲನೆಯದರ ಫಲವೇ ನೀನು. ಹೀಗೆ ಪಾಂಡವರಲ್ಲಿ ನೀನು ಹಿರಿಯನಾಗಿರುವುದರಿಂದ ಭೂಮಿಗಾಗಿ ಪಾಂಡವ ಕೌರವರು ಕಲಹಮಾಡಬೇಕಾದ ಪ್ರಮೇಯವೇ ಇಲ್ಲ. ನನ್ನೊ ಡನೆ ಹೊರಟು ಬಾ. ಪಂಚಪಾಂಡವರನ್ನು ನಿನ್ನ ಪದತಲದಲ್ಲಿ ಉರುಳಿ ಸುತ್ತೇನೆ. ಹಸ್ತಿನಾಪುರದ ಪಟ್ಟವನ್ನು ಸ್ವೀಕರಿಸಿ, ಎರಡು ಕಡೆಯವ ರಿಂದಲೂ ಕೈಂಕರ್ಯವನ್ನು ಸ್ವೀಕರಿಸು. ಜಗತ್ತಿನ ಸಮಸ್ತರಾಜರು ಗಳಿಂದಲೂ ಸೇವೆಯನ್ನು ಕೈಕೊಳ್ಳುತ್ತಾ ಚಕ್ರವರ್ತಿಪದವಿಯನ್ನು ಅನು ಭವಿಸುವುದನ್ನು ಬಿಟ್ಟು ದುರ್ಯೋಧನನ ಬಳಿಯಲ್ಲಿ "ಜೀಯ, ಹಸಾದ" ಎಂದುಕೊಳ್ಳುತ್ತಾ ಬಿದ್ದಿರಬೇಕೆ?" ಎಂದನು.

ಕೃಷ್ಣನ ಮಾತುಗಳನ್ನು ಕೇಳುತ್ತಾ ಹೋದಂತೆ ಕರ್ಣನಿಗೆ ದಿಕ್ಕೇ ತೋಚದಂತಾಯಿತು. ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯಿತು. ಅಯ್ಯೋ! ಕುರುಪತಿಗೆ ಕೇಡಾಯಿತು, ಎಂದು ಮನದಲ್ಲೇ ಮಿಡುಕಿ ಕೊಂಡನು. ಈಗ ಕರ್ಣನ ಸ್ಥಿತಿ ಅತ್ತ ಪುಲಿ, ಇತ್ತ ದರಿ ಎಂಬಂತಾಯಿತು. ಪಾಂಡವರೊಡನೆ ಹೋರಾಡಿ ಅವರನ್ನು ಕೊಂದಾನೆ, ಅವರು ಸೋದರರು. ಕೊಲ್ಲದೆ ಬಿಟ್ಟಾನೆಯೆ, ಕೌರವನಿಗೆ ಭೂಮಿಯಲ್ಲಿ ಇರಲು ಎಡೆಯಿಲ್ಲ. ಶ್ರೀಕೃಷ್ಣನ ಭೇದೋಪಾಯವು ಚೆನ್ನಾಗಿ ಫಲಿಸಿಹೋಯಿತು. ಕರ್ಣನು ಏನೂ ತೋಚದೆ ಕ್ಷಣಕಾಲ ಮೌನವಾಗಿದ್ದನು. ಆದರೆ ಕೃಷ್ಣನು ಅವನ ಮೌನವನ್ನು ಮುರಿದನು. " ಏನು ಕರ್ಣಾ, ನಿನ್ನ ಅಭಿಪ್ರಾಯವೇನು ? ನಾನೇನೂ ನಿನ್ನ ಅಶ್ರೇಯಸ್ಸನ್ನು ಕೋರತಕ್ಕವನಲ್ಲ. ನಿನ್ನ ಅಭಿಪ್ರಾಯ ವನ್ನು ಸ್ಪಷ್ಟವಾಗಿ ತಿಳಿಸಿಬಿಡು " ಎಂದನು. ಕರ್ಣನು ತನ್ನ ಕುಲ ಗೌರವಗಳಿಗೆ ಉಚಿತವಾದ ರೀತಿಯಲ್ಲಿ ಉತ್ತರ ಕೊಟ್ಟನು.

" ಎಲೈ ಕೃಷ್ಣಸ್ವಾಮಿಯೇ, ನಾನು ಪಾಂಡವರನ್ನು ಸೇರಬಯಸು ವುದು ಕೇವಲ ಮರುಳುತನವೇ ಸರಿ. ರಾಜ್ಯೈಶ್ವರ್ಯಗಳನ್ನು ಕಂಡು ನಾನು ಮನಸೋಲುವವನಲ್ಲ. ನನ್ನನ್ನು ಸಲಹಿದ ಒಡೆಯನಿಗೆ ಶತ್ರು ಗಳ ತಲೆಯನ್ನು ಕಾಣಿಕೆಯಾಗಿ ಕೊಡಬೇಕೆಂದಿದ್ದೆನು. ಈಗ ಅದು ತಪ್ಪಿತು. ಪಾಂಡವರ ಪ್ರಾಣಗಳು ನನ್ನ ಬಾಣಕ್ಕೆ ಗುರಿಯಾಗುತ್ತಿದ್ದು ದನ್ನು ನೀನು ತಪ್ಪಿಸಿದೆ ಆ ಮೂಲಕ ಸುಯೋಧನನ ಸಾವಿಗೂ ಹೆದ್ದಾರಿಯನ್ನು ನಿರ್ಮಿಸಿದೆ. ಆದರೆ ನಾನು ನನ್ನ ಪ್ರಭುವಿಗಾದ ಗತಿ ಯನ್ನೇ ಆಲಂಗಿಸುವೆನಲ್ಲದೆ ಪಾಂಡವರಲ್ಲಿ ಸೇರೆನು. ವೀರ ಕೌರವ ರಾಯನ ಹಗೆ ನನಗೂ ಹಗೆಯೇಸರಿ. ಆತನ ಋಣವು ಹಿಂಗು ವಂತೆ ಯುದ್ಧಮಾಡಿ ಸುಭಟಕೋಟಿಯನ್ನು ಸಂಹಾರ ಮಾಡುವೆನು. ಪತಿಕಾರ್ಯದಲ್ಲಿಯೇ ನನ್ನ ಶರೀರವನ್ನು ಸವೆಸುವೆನು. ಆದರೆ ನಿನ್ನ ಪಂಚಪ್ರಾಣದಂತಿರುವ ಪಾಂಡವರನ್ನು ಕೊಲ್ಲುವುದಿಲ್ಲ. ಇದಕ್ಕೆ ನನ್ನ ತಂದೆ ಸೂರ್ಯನೇ ಸಾಕ್ಷಿ " ಎಂದನು.

ಕರ್ಣನ ದೃಢವನ್ನು ಕಂಡು ಕೃಷ್ಣನು ಮನಸಾ ಆತನನ್ನು ಮೆಚ್ಚಿದನು. ತಾನು ಕೈಕೊಂಡ ಕಾರ್ಯವೇನೊ ಫಲಿಸಿದಂತಾಯಿತು. ಆದರೂ ಅಲ್ಲಿಗೇ ಅದನ್ನು ನಿಲ್ಲಿಸದೆ " ಅಯ್ಯಾ, ನೀನು ಪಾಂಡವರ ಕಡೆ ಸೇರಿದರೆ ಸರ್ವಸಂತೋಷ. ಆದಾಗದಿದ್ದರೆ ದುರ್ಯೋಧನನಿಗೆ ಹೇಳಿ,

ನಿನ್ನ ತಮ್ಮಂದಿರಿಗೆ ರಾಜ್ಯವನ್ನಾದರೂ ಕೊಡಿಸು. ನಿನ್ನ ಮಾತನ್ನು ಮಿತ್ರನಾದ ಸುಯೋಧನನು ಎಂದಿಗೂ ಅಲ್ಲಗಳೆಯುವುದಿಲ್ಲ" ಎಂದನು. ಆದರೆ ಯುದ್ಧಕ್ಕಾಗಿ ಸರ್ವಸನ್ನಾಹಗಳೂ ಸಿದ್ಧವಾಗಿರುವ ಈ ವಿಷಮ ಸನ್ನಿವೇಶದಲ್ಲಿ ಸಂಧಿಯ ಸುದ್ದಿಯನ್ನೆತ್ತುವುದು ಅಷ್ಟು ಉಚಿತವಾಗಿ ತೋರಲಿಲ್ಲ, ಕರ್ಣನಿಗೆ. ತನ್ನ ಶೌರ್ಯಕ್ಕೂ ಅದು ಕುಂದೆಂದು ಆತನ ಭಾವನೆ. ಆದ್ದರಿಂದ ಕೃಷ್ಣನ ಮಾತುಗಳನ್ನು ಒಪ್ಪಲಿಲ್ಲ. ಆಗಲೇ ಸೂರ್ಯನು ಮುಳುಗುವ ಸಮಯವಾಗಿದ್ದುದರಿಂದ, ಇನ್ನು ಕೌರವ ವೈರಿಯಾದ ಕೃಷ್ಣನೊಡನೆ ಏಕಾಂತವಾಗಿ ಮಾತನಾಡುತ್ತಿರುವುದು ಅಯೋಗ್ಯವೆನಿಸಿತು ಆತನಿಗೆ. "ಸ್ವಾಮಿ, ನನಗೆ ಅಪ್ಪಣೆಯನ್ನು ಕೊಡಿ; ನಾನು ಹೊರಟು ಹೋಗುತ್ತೇನೆ. ಹಾವಿನ ಹುತ್ತದ ಬಳಿಯಿದ್ದ ಹುಲ್ಲಿನ ಸರವೂ ಹಾವೆಂಬ ಭ್ರಮೆಯನ್ನು ಹುಟ್ಟಿಸುತ್ತದೆ. ನೀಚರಾದ ವರು ನಮ್ಮ ಸಂಭಾಷಣೆಗೆ ಅಪಾರ್ಥ ಕಲ್ಪಿಸಬಹುದು" ಎಂದು ಹೇಳಿ ಆತನಿಂದ ಬೀಳ್ಕೊಂಡು ತನ್ನ ಮನೆಗೆ ಹಿಂದಿರುಗಿದನು.

ಕೃಷ್ಣನು ತನ್ನ ಮನಸ್ಸಿನಲ್ಲಿ ಬಿತ್ತಿದ್ದ ಅಶಾಂತಿಯಿಂದ ಕರ್ಣನಿಗೆ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ಕೌರವನ ಗತಿಯೇನು ಎಂಬುದೊಂದೇ ಆತನ ಚಿಂತೆ. ಚಿಂತೆಯಲ್ಲಿಯೇ ರಾತ್ರಿ ಕಳೆದು ಬೆಳಕು ಹರಿಯಿತು. ಆ ದಿನ ಭಾನುವಾರವಾದುದರಿಂದ ಆತನು ಸೂರ್ಯನಿಗೆ ಅರ್ಘ್ಯವನ್ನು ಕೊಡುವುದಕ್ಕಾಗಿ ಗಂಗಾ ನದಿಗೆ ಹೋದನು. ಅಲ್ಲಿ ಸ್ನಾನಮಾಡಿ ಸೂರ್ಯಮಂತ್ರವನ್ನು ಜಪಿಸುತ್ತಾ ನೀರಿನಲ್ಲಿ ನಿಂತಿರಲು, ಕುಂತೀದೇವಿ ಆತನನ್ನು ಅರಸುತ್ತಾ ಅಲ್ಲಿಗೆ ಬಂದಳು. ಕರ್ಣನು ಆಕೆಗೆ ನಮಸ್ಕರಿಸಿ ಕೈ ಜೋಡಿಸಿ ನಿಂತಿರಲು, ಆಕೆ ಆತನನ್ನು ಪಾಂಡವರ ಪಕ್ಷವನ್ನು ಸೇರುವಂತೆ ಹೇಳಿದಳು. ಕರ್ಣನು ನಿರ್ದಾಕ್ಷಿಣ್ಯವಾಗಿ ತನ್ನ ಅಭಿಪ್ರಾಯವನ್ನು ತಿಳಿಸಿದನು.

ಇಂದು ನೀವುಗಳೆಲ್ಲ ಹೇಳಿದ ಮೇಲೆ ನಾನು ಸೂರ್ಯಪುತ್ರನೆಂದು ಗೊತ್ತಾಯಿತು. ಆದರೆ, ಇದಕ್ಕೆ ಮುನ್ನ ನನ್ನನ್ನು ಕೈಹಿಡಿದು ಉದ್ಧಾರಮಾಡಿದ ಕೌರವೇಂದ್ರನು ಏನನ್ನು ನೋಡಿ ಹಾಗೆ ಮಾಡಿದನು ? ಈಗ ಬಂದು ಪಾಂಡವರೊಡನೆ ಸೇರಿಕೊಂಡರೆ ಅಪಕೀರ್ತಿ ಬರುತ್ತದೆ. ಆದ್ದರಿಂದ ಅದನ್ನು ಬಿಟ್ಟು ಮತ್ತೇನನ್ನಾದರೂ ಕೇಳು" ಎಂದನು. ಕುಂತಿ ಮಗನಲ್ಲಿ ಎರಡು ವರಗಳನ್ನು ಬೇಡಿದಳು. "ನಿನ್ನ ಐವರು

ತಮ್ಮಂದಿರನ್ನೂ ತಲೆಗಾಯಿ; ತೊಟ್ಟ ಬಾಣವನ್ನು ತೊಡಬೇಡ.''
ಮಹಾನುಭಾವನಾದ ಕರ್ಣನು ತಾಯಿಯ ಮಾತಿಗೆ ತಥಾಸ್ತು ಎಂದನು.

ಅತ್ತ ಶ್ರೀಕೃಷ್ಣನು ಹಸ್ತಿನಾಪುರಿಯಿಂದ ಹಿಂತಿರುಗಿ ಪಾಂಡವರ ಬಳಿಗೆ ಬಂದು ಅಲ್ಲಿ ನಡೆದುದೆಲ್ಲವನನ್ನೂ ಅವರಿಗೆ ಹೇಳಿದನು. ಆಗ ಪಾಂಡವರು ತಮ್ಮ ಅಪಾರವಾದ ಸೈನ್ಯದೊಡನೆ ವಿಜಯಯಾತ್ರೆ ಹೊರಟು ಕುರುಕ್ಷೇತ್ರದ ಮೈದಾನದಲ್ಲಿ ಬೀಡುಬಿಟ್ಟರು.

## ೬. ವಿಮರ್ಶೆ

ವಸ್ತು, ಪಾತ್ರ, ರಸ–ಇವುಗಳಲ್ಲಿ ಯಾವ ದೃಷ್ಟಿಯಿಂದ ನೋಡಿದರೂ, ಕನ್ನಡ ಮಹಾಭಾರತದ ಉದ್ಯೋಗಪರ್ವದ ಭಾಗ ಅತ್ಯುತ್ಕೃಷ್ಟವಾಗಿದೆ.

ಮೊದಲು ಉದ್ಯೋಗಪರ್ವದ ವಸ್ತುವನ್ನೇ ಪರಿಶೀಲಿಸೋಣ. ನೂರುತೊಂಬತ್ತಾರು ಅಧ್ಯಾಯಗಳನ್ನೊಳಗೊಂಡು, **ಸೇನೋದ್ಯೋಗ ಪರ್ವ, ಸಂಜಯಯಾನಪರ್ವ, ಪ್ರಜಾಗರಪರ್ವ, ಸನತ್ಸುಜಾತ ಪರ್ವ, ಯಾನಸಂಧಿಪರ್ವ, ಭಗವದ್ಯಾನಪರ್ವ, ಸೈನ್ಯನಿರ್ಯಾಣ ಪರ್ವ, ಉಲೂಕದೂತಾಗಮನಪರ್ವ, ರಥಾತಿಸಂಖ್ಯಾನಪರ್ವ, ಅಂಬೋಪಾಖ್ಯಾನಪರ್ವ** ಎಂಬ ಹತ್ತು ಉಪಪರ್ವಗಳಿಂದ ಕೂಡಿದ ಸಂಸ್ಕೃತ ಮಹಾಭಾರತದ ಉದ್ಯೋಗಪರ್ವವೇ ಕನ್ನಡ ಮಹಾಭಾರತದ ಉದ್ಯೋಗಪರ್ವಕ್ಕೆ ಮೂಲ. ಉಪದೇಶ, ಉಪಾಖ್ಯಾನಗಳಿಂದ ಕೂಡಿದ ಈ ವಿಸ್ತಾರವಾದ ಕಥೆಯನ್ನು ಕುಮಾರವ್ಯಾಸನು ಹನ್ನೊಂದು ಸಂಧಿಗಳಲ್ಲಿ, ಏಳುನೂರಕ್ಕೆ ಮೀರಿದ ಭಾಮಿನೀಷಟ್ಪದಿಯ ಪದ್ಯಗಳಲ್ಲಿ ತನ್ನದೇ ಆದ ರೀತಿಯಲ್ಲಿ ಸಂಗ್ರಹಿಸಿದ್ದಾನೆ. ಈ ಸಂಗ್ರಹಕಾರ್ಯದಲ್ಲಿ ಕವಿ ಮೂಲದ ಕಥೆಯನ್ನೇ ಹೆಜ್ಜೆ ಹೆಜ್ಜೆಗೂ ಅನುಸರಿಸಿದ್ದರೂ ಅನೇಕ ಕಡೆ ಮೂಲದ ಶ್ಲೋಕಗಳನ್ನು ಭಾಷಾಂತರ ಮಾಡುತ್ತಾನೆ. (ವಿಸ್ತಾರ ಭಯದಿಂದ ಉದಾಹರಣೆಗಳನ್ನು ಕೊಟ್ಟಿಲ್ಲ) ಮೂಲದ ವಿಸ್ತಾರವಾದ ಸನ್ನಿವೇಶಗಳನ್ನು ಸಂಗ್ರಹವಾಗಿ, ಸಾರವತ್ತಾಗಿ ನಿರೂಪಿಸುತ್ತಾನೆ. ಸನ್ನಿವೇಶಗಳನ್ನು ಸ್ಥಳಪಲ್ಲಟ ಮಾಡುತ್ತಾನೆ. ಹೊಸದಾಗಿ ಸನ್ನಿವೇಶಗಳನ್ನು ಕಲ್ಪಿಸಿಕೊಳ್ಳುತ್ತಾನೆ. ಒಂದೊಂದು ಅಂಶಕ್ಕೂ ಒಂದೊಂದು ಉದಾಹರಣೆಯನ್ನು ಕೊಟ್ಟು ಈ ವಿಷಯವನ್ನು ಸ್ಪಷ್ಟಪಡಿಸಬಹುದು.

ಮೂಲ ಭಾರತದಲ್ಲಿ ಬರುವ ಉಪಪರ್ವಗಳಲ್ಲಿ ಕೊನೆಯ ಮೂರು ಉಪಪರ್ವಗಳನ್ನು ಕವಿ ಕೈಬಿಟ್ಟಿದ್ದಾನೆ. ಅಲ್ಲದೆ ಪ್ರಜಾಗರ, ಸನತ್ಸುಜಾತ ಪರ್ವಗಳಲ್ಲಿ ಕವಿ ಮೂಲವನ್ನು ಅನುಸರಿಸದೆ, ಆ ಪರ್ವಗಳಿಗೆ ನಾನಾ ಕಡೆಯಿಂದ ವಿಷಯ ಸಂಗ್ರಹ ಮಾಡಿದ್ದಾನೆ. ಭಾರತದಲ್ಲಿ ಬರುವ ವಿಸ್ತಾರವಾದ ಉಪದೇಶ ಉಪಾಖ್ಯಾನಗಳಿಗೆ ಕುಮಾರವ್ಯಾಸನಲ್ಲಿ ಎಡೆಯೇ ಇಲ್ಲ. ಒಂದು ವೇಳೆ ಕಥೆಯ ದೃಷ್ಟಿಯಿಂದ ಒಂದು ಉಪಾಖ್ಯಾನ ಮುಖ್ಯವೆಂದು ತೋರಿದರೆ, ಕವಿ ಅದನ್ನು ಒಂದು ಪದ್ಯದಲ್ಲೋ ಇಲ್ಲವೆ ಅರ್ಧ ಪದ್ಯದಲ್ಲೋ ಸಂಗ್ರಹಿಸುತ್ತಾನೆ. ಉದಾಹರಣೆಗೆ ದುರ್ಯೋಧನನ ಪಕ್ಷವನ್ನು ನಿರ್ವಾಹವಿಲ್ಲದೆ ಸೇರಿದ ಶಲ್ಯನು, ತಂಗಿಯ ಮಕ್ಕಳನ್ನು ನೋಡಿಕೊಂಡು ಬರಲು ಧರ್ಮರಾಜನ ಬಳಿಗೆ ಬರುತ್ತಾನೆ. ಪರಸ್ಪರ ಕುಶಲಪ್ರಶ್ನೆಗಳಾದ ಮೇಲೆ ಶಲ್ಯನು ಧರ್ಮರಾಜನಿಗೆ ಧೈರ್ಯ ಹೇಳಿ, ಸುಮಾರು ಹತ್ತು ಅಧ್ಯಾಯಗಳಲ್ಲಿ ಬರುವ ನಹುಷನ ಕಥೆಯನ್ನು ಅವನಿಗೆ ಹೇಳುತ್ತಾನೆ. ಅದನ್ನೇ ಕುಮಾರವ್ಯಾಸನು 'ಆದಡೇನೆಲೆ ಕಂದ ತಪ್ಪದು ಮೇದಿನಿಯ ಸಿರಿ ನಿಮಗೆ ಸತ್ಯವ ಕಾದು ಹದಿಮೂಱುಬುದ ನವೆದಿರಿ ಮುಂದೆ ಲೇಸಹುದು' ಎಂದು ಶಲ್ಯನಿಂದ ಹೇಳಿಸಿ 'ಕಾದಿ ವೃತ್ರಾಸುರನ ಮುಱಿದಪವಾದದಲಿ ಸಿರಿ ಹೋಗಿ ದುಃಖಿತನಾದನಿಂದ್ರನು ಮತ್ತೆ ಬದುಕಿದ ಶಚಿಯ ದೆಸೆಯಿಂದ' ಎಂದು ಆ ಕಥೆಯನ್ನು ಮುಗಿಸಿಬಿಡುತ್ತಾನೆ. ಮೂಲದಲ್ಲಿ ಎರಡು ಅಧ್ಯಾಯಗಳಲ್ಲಿ ಬರುವ ದ್ರುಪದರಾಜಪುರೋಹಿತನ ದೌತ್ಯ, ಕನ್ನಡ ಭಾರತದಲ್ಲಿ 'ದ್ರುಪದರಾಜ ಪುರೋಹಿತನು ಕುರುನೃಪನನಿತ್ತಲು ಬಂದು ಕಂಡನು ವಿಪುಳಮತಿ ಮಾತಾಡಿದನು ನಿಜರಾಜಕಾರಿಯವ' ಎಂಬ ಅರ್ಧಪದ್ಯದಲ್ಲೇ ಮುಗಿದುಹೋಗಿದೆ. ಹಾಗೆಯೇ ಸಂಜಯನು ಪಾಂಡವರಿಗೆ ಕೌರವರ ಸಂದೇಶವನ್ನೂ, ಕೌರವರಿಗೆ ಪಾಂಡವರ ಸಂದೇಶವನ್ನೂ ಹೇಳಿದ ಭಾಗ ಕುಮಾರವ್ಯಾಸನಲ್ಲಿ ಮೂಲದ ವಿಸ್ತಾರವನ್ನುಳಿದು ಸಂಗ್ರಹವಾಗಿ ಸಾರವತ್ತಾಗಿ ಬಂದಿದೆ. ಕುಮಾರವ್ಯಾಸನಲ್ಲಿ ಪುನರುಕ್ತಿ ದೋಷವನ್ನು ಆರೋಪಿಸುವ ವಿಮರ್ಶಕರು ಈ ಭಾಗವನ್ನು ಮೂಲದೊಡನೆ ಹೋಲಿಸಿ ನೋಡಲಿ ; ಕುಮಾರವ್ಯಾಸ ಎಂಥ ಘನವಾದ ವಿಷಯಗಳನ್ನು ಸಂಗ್ರಹವಾಗಿ ಸಾರವತ್ತಾಗಿ ತನಗೇ ವಿಶಿಷ್ಟವಾದ ರೀತಿಯಲ್ಲಿ ನಿರೂಪಿಸಬಲ್ಲನೆಂಬುದು ಮನದಟ್ಟಾಗುತ್ತದೆ.

ಯಾನಸಂಧಿಪರ್ವದಲ್ಲಿ ಬರುವ ಕರ್ಣನ ಶಸ್ತ್ರಸಂನ್ಯಾಸವನ್ನೂ, ಉಲೂಕದೂತಾಗಮನಪರ್ವದಲ್ಲಿ ಬರುವ ಉಲೂಕನ ದೌತ್ಯವನ್ನೂ ಕವಿ ಭೀಷ್ಮಪರ್ವದ ಮೊದಲನೆಯ ಸಂಧಿಯಲ್ಲಿ ಹೇಳಿದ್ದಾನೆ.

ಕೊನೆಯದಾಗಿ ಇನ್ನೊಂದು ಮಾತು. ಸಂಸ್ಕೃತ ಭಾರತದಲ್ಲಿ ಸಂಧಿಗಾಗಿ ಬಂದ ಕೃಷ್ಣನನ್ನು ಸಭೆಗೆ ಕರೆತರಲು ದುರ್ಯೋಧನ ಶಕುನಿಗಳೇ ವಿದುರನ ಮನೆಗೆ ಹೋಗುತ್ತಾರೆ. ರಾಜಸಭೆಯನ್ನು ಹೊಕ್ಕ ಕೃಷ್ಣನಿಗೆ ದುರ್ಯೋಧನ ಕರ್ಣರೇ ದಾರಿ ತೋರಿಸುತ್ತಾರೆ. ರಾಜಸಭೆಯಲ್ಲಿ ಎಲ್ಲಿಲ್ಲದ ಆದರ ಕೃಷ್ಣನಿಗೆ. ಪಂಪ ಭಾರತದಲ್ಲಿ ರಾಜಸಭೆಗೆ ಬಂದಾಗ ಎದ್ದು ಅವನನ್ನು ಸತ್ಕರಿಸಬೇಕೆಂಬ ಮನಸ್ಸೇನೂ ಕೌರವನಿಗಿರಲಿಲ್ಲ. ಆದರೆ 'ಅಂಜನಾಚಲದವೋಲ್ ಕಣ್ಗೊಪ್ಪಿ ಬರ್ಪಂಬುಜೋದರನನ್ನು ನೋಡಿ, ಅವನ ಪ್ರಭಾವಕ್ಕೆ ಮನಸೋತು 'ಮೆಯ್ಯಲಸಿದಂತೆಂತಾನುಮೆಟ್ಟಿದ್ದರ್ು' ಅವನಿಗೆ ಸತ್ಕರಿಸುತ್ತಾನೆ. ಕುಮಾರವ್ಯಾಸನಲ್ಲಿಯಾದರೋ, ಕೃಷ್ಣನು ಸಭೆಗೆ ಬಂದಾಗ ಅವನನ್ನು ಎಲ್ಲರೂ ಗೌರವಿಸಿದರು. ಕೌರವನ ಓಲಗದ ಸಿರಿ ನೊಸಲ ಕೈಗಳಲ್ಲಿ ತಲೆಬಾಗಿತು. ಆದರೆ ಕುಮತಿ ಕೌರವ, ಕೃಷ್ಣನಿಂದೇನು ಎಂಬ ಅಹಂಕಾರದಿಂದ ಸಿಂಹವಿಷ್ಟರವನ್ನು ಬಿಟ್ಟೇಳಲಿಲ್ಲ. ಇದನ್ನು ನೋಡಿ ಸೆಣಸು ಸೇರದ ಕೃಷ್ಣ ಉಂಗುಟದ ತುದಿಯಿಂದ ಭೂಮಿಯನ್ನು ಒತ್ತಿದನು. ಇದರ ಫಲವಾಗಿ ಕೌರವನು ಕುಳಿತಿದ್ದ 'ಮಣಿಖಚಿತ ಕಾಂಚನದ ಪೀಠದ ಗೊಣಸು ಮುರಿದು ಕೆಡೆದು ಬಿದ್ದನು ಹರಿಯ ಚರಣದಲಿ.' ಮೂಲದಲ್ಲಿಲ್ಲದ ಕೃಷ್ಣನ ಮಹಿಮೆಯನ್ನು ಬೀರುವ ಈ ಸನ್ನಿವೇಶವನ್ನು ಕುಮಾರವ್ಯಾಸನು ಭಾಸನ 'ದೂತವಾಕ್ಯ' ವೆಂಬ ನಾಟಕದಿಂದ ತೆಗೆದುಕೊಂಡಿರಬಹುದು. ನಾಟಕದಲ್ಲಿ ರಾಜಸಭೆಗೆ ಕೃಷ್ಣನು ಬಂದಾಗ ಅವನನ್ನು ಅಪಮಾನಗೊಳಿಸಲೆಂಬಂತೆ, ದುರ್ಯೋಧನನು ದ್ರೌಪದೀವಸ್ತ್ರಾಪಹರಣ ಚಿತ್ರವನ್ನು ನೋಡುವುದರಲ್ಲಿ ಮಗ್ನನಾಗಿರುತ್ತಾನೆ. ಆಸನದಿಂದ ಬಿದ್ದಮೇಲೆಯೇ ಅವನಿಗೆ ಕೃಷ್ಣನು ಬಂದುದು ಗೊತ್ತಾಗುತ್ತದೆ. ಕುಮಾರವ್ಯಾಸನು ಈ ಸೂಚನೆಯನ್ನೇ ತೆಗೆದುಕೊಂಡು ಅದನ್ನು ತನಗೆ ತೋಚಿದ ರೀತಿಯಲ್ಲಿ ಮಾರ್ಪಡಿಸಿಕೊಂಡು ಕೃಷ್ಣನ ಮಹಿಮೆಯನ್ನು ಸಾರಿದ್ದರೂ, ತುಂಬು ಸಭೆಯಲ್ಲಿ ದೌತ್ಯಕ್ಕಾಗಿ ಬಂದ ಕೃಷ್ಣನು ಅವನನ್ನು ಅವಮಾನ ಮಾಡಿದನೆಂದು ಹೇಳಿರುವುದು ಅಷ್ಟು ಉಚಿತವಾಗಿಲ್ಲ.

ಈ ಭಾಗವನ್ನು ಮುಗಿಸುವುದಕ್ಕಿಂತ ಮುಂಚೆ ಕುಮಾರವ್ಯಾಸನು ಪಂಪನಿಗೆ ಋಣಿಯೇ ಎಂಬ ಅಂಶವನ್ನು ಪರಿಶೀಲಿಸಬಹುದು. ಪಂಪ, ಕುಮಾರವ್ಯಾಸರಿಗೆ ವ್ಯಾಸ ಭಾರತವೇ ಮೂಲವಾಗಿದ್ದರೂ, ಈ ಇಬ್ಬರು ಕವಿಗಳು ಆ ಬೃಹತ್ ಕಥೆಯನ್ನು ತಮ್ಮ ತಮ್ಮ ಅಭಿರುಚಿಗೆ ತಕ್ಕಂತೆ ಸಂಗ್ರಹಿಸಿರುತ್ತಾರೆ. ಇವರಲ್ಲಿ ಕಾಲದ ದೃಷ್ಟಿಯಿಂದ ಹಿರಿಯವನಾದ ಪಂಪನನ್ನು ಕುಮಾರವ್ಯಾಸನು ಎಲ್ಲಿಯಾದರೂ ಅನುಸರಿಸಿರುವನೇ ಎಂಬ ಕುತೂಹಲ ನಮ್ಮಲ್ಲಿ ಸಹಜವಾಗಿ ಹುಟ್ಟುತ್ತದೆ. ಈ ಉದ್ಯೋಗ ಪರ್ವದ ಭಾಗದಲ್ಲಿ ಭಾರತದಲ್ಲಿಲ್ಲದ ಎರಡು ಸನ್ನಿವೇಶಗಳು ಪಂಪ, ಕುಮಾರವ್ಯಾಸರ ಭಾರತಗಳಲ್ಲಿ ಕಂಡು ಬರುತ್ತವೆ. ಆದ್ದರಿಂದ ಕುಮಾರವ್ಯಾಸನಿಗೆ ಪಂಪಭಾರತದ ಗಾಢವಾದ ಪರಿಚಯವಿದ್ದು, ಅದರ ಕೆಲವು ಭಾಗಗಳು ಆತನಿಗೆ ಅತ್ಯಂತ ಪ್ರಿಯವಾಗಿದ್ದವೆಂದು ಸ್ಪಷ್ಟವಾಗುತ್ತದೆ. ಹಾಗೆ ಆ ಭಾಗಗಳು ಕವಿಗೆ ಪ್ರಿಯವಾಗದಿದ್ದರೆ, ಅವನು ಅವುಗಳನ್ನು ತನ್ನ ಕಾವ್ಯದಲ್ಲೇಕೆ ಸೇರಿಸಿಕೊಳ್ಳುತ್ತಿದ್ದ ?

ಪಂಪ ಭಾರತದ ಮತ್ತು ಕುಮಾರವ್ಯಾಸರ ಭಾರತಗಳಲ್ಲಿದ್ದು ಮೂಲ ಭಾರತದಲ್ಲಿಲ್ಲದ ಎರಡು ಸನ್ನಿವೇಶಗಳು.

೧. ಕೃಷ್ಣನು ದುರ್ಯೋಧನನನ್ನು ಸಂಧಿಗೆ ಒಪ್ಪಿಸಲು ಪ್ರಯತ್ನ ಪಡುತ್ತಾನೆ. ಆಗ ದುರ್ಯೋಧನನು ಕೋಪಗೊಂಡು

ಪಿಟ್ರೊಪೋಗು ದೂತನಪ್ಪನ
ಬೆಟ್ಟಿನ ನುಡಿಗೇಳ್ದು ಮುಳಿಯಲಾಗದು ನೀನುಂ ।
ಮೆಟ್ಟಿಪ್ಪ ವಿದುರನೆಂಬೀ
ತೊಟ್ಟಿಪ್ಪಿಯ ಮನೆಯ ಕೂಟ್ರೆ ನುಡಿಯಿಸೆ ನುಡಿಪೈ ॥

ಎನೆ ವಿದುರನತಿಕುಪಿತಮನನಾಗಿ—

ಕಡುಮುಳಿದು ನಿನ್ನ ತೊಡೆಗಳ
ನುಡಿವೆಡೆಯೊಳ್ ಭೀಮಸೇನನಾನಾಪದದೊಳ್ ।
ಪಿಡಿಯಲ್ಕೆಂದಿರ್ದೆನಿದಂ
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ ॥

**ಪಂಪಭಾರತ ೫೮, ೫೯**

ಗದುಗಿನ ಭಾರತದಲ್ಲಿಯೂ ಸಂಧಿಗಾಗಿ ಕೃಷ್ಣನು ಕೌರವನ ಸಭೆಗೆ ಬಂದಾಗ, ದುರ್ಯೋಧನನು 'ಕೃಷ್ಣನಿಂದ ನನಗೇನಾಗಬೇಕು ?' ಎಂಬ ಅಹಂಕಾರದಿಂದ ಸಿಂಹಾಸನವನ್ನು ಬಿಟ್ಟೇಳಲೇ ಇಲ್ಲ. ಸೆಣಸು ಸೇರದ ಕೃಷ್ಣನು ಕೌರವನ ಅಹಂಕಾರಕ್ಕೆ ಪ್ರಾಯಶ್ಚಿತ್ತವಾಗಿ, ಅವನು ತನ್ನ ಕಾಲ ಮೇಲೆ ಸಿಂಹಾಸನದಿಂದ ಬಂದು ಬೀಳುವಂತೆ ಮಾಡಿದನು. ಎಲ್ಲರೂ ಕುಳಿತ ಮೇಲೆ ಕೃಷ್ಣನು ದುರ್ಯೋಧನನ ದುಗುಡಕ್ಕೆ ಕಾರಣ ವನ್ನು ಕೇಳಲು, ಅವನು ಅದಕ್ಕೆ ಕಾರಣವನ್ನು ಹೇಳಿ —

ಈ ಕೃಪನ ಈ ದ್ರೋಣನೀ ಗಂ
ಗಾ ಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನ ಮಗನ ಮನೆಯಲಿ ಹಸಿವ ನೂಕಿದಿರಿ ।

ಸಾಕಿದಾತನು ನಂದಗೋಪನು
ಕಾಕ ಬಳಸಲು ಸಲ್ಲದೇ ನಿಮ
ಗೇಕೆ ರಾಯರ ಠೀವಿಯೆಂದನು ನಗುತ ಕುರುರಾಯ ॥

ಕುರುಪತಿಯ ಬಿಱುನುಡಿಯ ಕೇಳಿದು
ಕರಣದಲಿ ಕೋಪಾಗ್ನಿಯುಕ್ಕಲು
ಕೆರಳಿ ನಿರ್ಭೀತಿಯಲಿ ನುಡಿದನು ವಿದುರನರಸಂಗೆ ॥

ಕಡುಮುಳಿದು ಕಲಿಭೀಮ ನಿನ್ನಯ
ತೊಡೆಗಳನು ಮುಱಿವಾ ಸಮಯದಲಿ
ಬಿಡದೆ ನಿನ್ನನು ಕಾಯಬೇಕೆಂದಳುಹಿದೆನು ಧನುವ ॥

ಕೆಡೆನುಡಿಸಿಕೊಂಡಿನ್ನು ಕಾವೆನೆ
ಪ್ರೊಡವಿಪತಿ ಕೇಳೆಂದು ವಿದುರನು
ಹಿಡಿದ ಬಿಲ್ಲನು ಮುಱಿದನಾ ಕುರುಸೇನೆ ಕಳವಳಿಸೆ ॥

ಉ. ಪ. ಸಂ. ೭-೪೫, ೪೭

೨. ಕುಂತಿ ಕರ್ಣನನ್ನು ಕಾಣಲು ಬಂದಾಗ 'ಗಂಗಾದೇವಿಯೂ ದಿವ್ಯಮೂರ್ತಿಯುಂ ಕೆಯ್ಕೊಂಡು ಬಂದು'—

ಒಪ್ಪಿಸಿವೆಂ ಕೈಯೆಡೆಯಂ
ದಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂ
ದಪ್ಪೈಸಿ ಗಂಗೆ ಪೋಪುದುಂ ।

ಪಂ. ಭಾ. ix-೭೬

ಎಂದು ಪಂಪ ಹೇಳುತ್ತಾನೆ. ಕುಮಾರವ್ಯಾಸನ ವರ್ಣನೆ ಇದು —

ಆ ಸಮಯದಲಿ ಗಂಗೆ ನಾರೀ
ವೇಷದಲಿ ನಡೆತಂದಳಲೆ ಕುಂ
ತೀ ಸತಿಯ ಕೈಯೆಡೆಯ ಕಂದನನೊಪ್ಪುಗೊಳು ನೀನು ।
ಈಸುದಿನವಿವನಾಗುಹೋಗಿನ
ಗಾಸಿಯನು ತಲೆಗಾಯ್ದೆನೆನ್ನಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ ॥

ಉ. ಪ. ಸಂ. ೮-೨೮

ಇನ್ನೊಂದು ಸಣ್ಣ ಅಂಶ. ಕುಂತಿ ಕರ್ಣನನ್ನು ಕಾಣಲು ಬಂದಾಗ ಸೂರ್ಯನು ಗಗನದಿಂದಲೇ 'ಕುಂತಿ ನುಡಿಯುವುದು ಸತ್ಯ. ನೀನು ಪಾಂಡವರ ಕಡೆ ಸೇರು' ಎಂದು ಹೇಳಿದನೆಂದು ವ್ಯಾಸರ ಹೇಳಿಕೆ. ಪಂಪನಲ್ಲಿಯಾದರೊ, ಗಂಗೆ ಕರ್ಣನನ್ನು ಕುಂತಿಗೆ ಒಪ್ಪಿಸಿ ಹೋದ ಮೇಲೆ ' ಒಪ್ಪುವ ನಿಜಬಿಂಬದೊಳಗಳಿಂದಂ ದಿನಪಂ

ಪೊಱಮಟ್ಟು ಬರಲ್ ತನ್ನಡಿ
ಗೆಱಗಿದ ನಿಜಸುತನನಕ್ಕಱಿಂ ಪರಸಿ ಮನಂ ।
ಮಱುಗಿ ರವಿ ನುಡಿದನೆನ್ನುಮ
ನುಱದೆ ಮರುಳ್ಮಗನೆ ಹರಿಗೆ ಕವಚಮನಿತ್ತೈ ॥

ನುಡಿಯೆನದಂ ನಿನ್ನಂಬಿಕೆ
ಪಡೆಮಾತೇಂ ಕೊಂತಿ ಹರಿಯ ಮತದಿಂ ಕಾಯಂ ।
ಲ್ಕೊಡರಿಸಿ ಬಂದಳ್ ಸುತರಂ
ಕುಡದಿರ್ ಪುರಿಗಣೆಯನೆನಿತು ಲಲ್ಲೈಸಿದೊಡಂ ॥

ಪಂ. ಭಾ. ix-೭೭, ೭೮

ಕುಮಾರವ್ಯಾಸನು ಇದೇ ಭಾಗವನ್ನು ತನ್ನ ಕಾವ್ಯದಲ್ಲಿ ಈ ರೀತಿ ಅನುವಾದಿಸುತ್ತಾನೆ—

ಇರಲಿರಲು ರವಿ ಬಂದನೆಕ್ಕಟಿ
ಕರೆದನೀತನ ಕಿವಿಯೊಳೆಲ್ಲವ
ನೊರೆದ ನಿನಗೆಲೆ ಮಗನೆ ಕುಂತೀದೇವಿ ತಾಯಹುದು ।
ಮುರಹರನ ಮತದಿಂದ ನಿನ್ನಯ
ಸರಳ ಬೇಡಲು ಬಂದಳರಿದಾ
ಹರಿಗೆ ಕವಚವನಿತ್ತವೊಲು ಮರುಳಾಗ ಬೇಡೆಂದ ॥

ಉ. ಪ. ಸಂ. ೮-೨೯

ಈ ವಿವರಣೆಯಿಂದ ಫಲಿತವಾಗುವುದಿಷ್ಟೆ. ಕುಮಾರವ್ಯಾಸನು ಸಂಸ್ಕೃತ ಮಹಾಭಾರತವನ್ನು ಆಮೂಲಾಗ್ರವಾಗಿ ತಿಳಿದುಕೊಂಡಿದ್ದ. ಭಾಸನ ನಾಟಕಗಳು, ಪಂಪಭಾರತ ಮುಂತಾದ ಗ್ರಂಥಗಳ ಗಾಢವಾದ ಪರಿಚಯು ಅವನಿಗಿತ್ತು. ಮಹಾಕವಿಯಾದ ಅವನು ಹೆರರಿಂದ ಪಡೆದ ವಸ್ತುವನ್ನು ಚೆನ್ನಾಗಿ ಜೀರ್ಣಿಸಿಕೊಂಡು, ದುಂಬಿಗಳು ಹೂವಿನ ಸಾರ ವನ್ನು ಜೀರ್ಣಿಸಿಕೊಂಡು ಲೋಕಕ್ಕೆ ಮಧುವನ್ನು ಕೊಡುವಂತೆ ಕನ್ನಡ ಲೋಕಕ್ಕೆ ಒಂದು ಉತ್ಕೃಷ್ಟವಾದ ಕಾವ್ಯವನ್ನು ದಾನಮಾಡಿದನು. ಶೀತಕಿರಣನಾದ ಚಂದ್ರನಲ್ಲಿ ಕಳಂಕವಿರುವಂತೆ (ಅದು ದೋಷವಲ್ಲ. ಭೂಷಣವೆಂದು ಕಾಳಿದಾಸನ ಹೇಳಿಕೆ) ನಮ್ಮ ಕವಿಯಲ್ಲಿ ಅಲ್ಲಲ್ಲೇ ದೋಷಗಳಿರಬಹುದು. ಆ ದೋಷಗಳನ್ನು ನಾವು ಗುಣಗಳೆಂದು ಸಮ ರ್ಥನೆ ಮಾಡುತ್ತಿಲ್ಲ. ಆದರೇನು ? 'ನಡೆವರೆಡಹದೆ ಕುಳಿತರೆಡಹುವರೆ ? ಕಾವ್ಯಮಂ ನಡಸುವಾತಂ ರಸಾವೇಶಮಱಹಾಲಸ್ಯವೆಡೆಗೊಳಲು ತಪ್ಪುಗುಂ' ಆದ್ದರಿಂದ ಅವನಲ್ಲಿ 'ಯತ್ ಸಾರಭೂತಂ ತದುಪಾಸಿತವ್ಯಂ.'

ಈ ಪರ್ವದಲ್ಲಿ ಬರುವ ಪಾತ್ರಗಳಲ್ಲಿ ಮುಖ್ಯರಾದವರು ಶ್ರೀಕೃಷ್ಣ, ದುರ್ಯೋಧನ ಮತ್ತು ಕರ್ಣ. ಕನ್ನಡ ಮಹಾಭಾರತಕ್ಕೆ ಶ್ರೀಕೃಷ್ಣನೇ ನಾಯಕನೆಂದರೂ ಸಲ್ಲುವುದು. ಧಾರಿಣಿಯು ಹೊರೆಗಳೆಯಲೋಸುಗ ಮನುಜ ವೇಷದಲ್ಲಿ ಬಂದಿರುವ ಅವನು ಭಗವಂತನ ಅಂಶವೆಂದು ಭಾರತ ದಲ್ಲಿ ಬರುವ ಪ್ರತಿಯೊಬ್ಬನಿಗೂ—ದುರ್ಯೋಧನನಿಗೂ ಸಹ—ಗೊತ್ತಿದೆ. ಭಕ್ತರಾದ ಪಾಂಡವರ ಮಾತು ಹಾಗಿರಲಿ. ಭೀಷ್ಮ, ದ್ರೋಣ, ಕರ್ಣ ದುರ್ಯೋಧನಾದಿಗಳೂ ಕೂಡ ಅವನ ಮೇಲ್ಮೆಯನ್ನರಿತು ಅವನ ಪ್ರಸಾದ ಕ್ಕಾಗಿ ಸಮಯ ಕಾಯುತ್ತಾರೆ. ಕೃಷ್ಣಭಕ್ತನಾದ ಕವಿಗೆ ಪಾಂಡವರ ಅಜ್ಞಾತವಾಸವನ್ನು ವರ್ಣಿಸುವ ವಿರಾಟಪರ್ವದಲ್ಲಿ ಕೃಷ್ಣನ ಮಹಿಮೆ ಯನ್ನು ಹೊಗಳಲು ಬಾಯಿ ಹೊಲಿದಂತಿತ್ತು. ಈ ಪರ್ವ ಮೊದಲಾಗು ತ್ತಲೆ ಪರೆಬಿಟ್ಟ ಹಾವಿನಂತೆ ಇನ್ನಿಲ್ಲದ ಮಾತಿನಲ್ಲಿ ಕೃಷ್ಣನ ಮಹಿಮೆ ಯನ್ನು ವಾಚಕರ ಮನಸ್ಸಿನ ಮೇಲೆ ಮೂಡುವಂತೆ ಹೊಗಳುತ್ತಾನೆ. ಆ ಹೊಗಳಿಕೆ ಸ್ತುತಿಪಾಠಕನ ಹೊಗಳಿಕೆಯಲ್ಲ ; ಕವಿಯ ಅಚಲವಾದ ದೈವಭಕ್ತಿ. 'ಕೃಷ್ಣನ ಲೀಲೆ ಅನುಪಮ' ಅವನು 'ಶರಣ ದೇಹಿಕ ದೇಹ' ಅಲ್ಲದೆ 'ಸೆಣಸು ಸೇರದ ದೇವ' ಅವನಿಗೆ ಪ್ರಿಯರಾದವರನ್ನು ಒಲಿದರೆ ಉಜ್ಜೀವಿಸುತ್ತಾನೆ. ಹಾಗಲ್ಲದೆ ಮುನಿದರೆ ತಲೆಯ ಬರಹ

ವನ್ನೇ ತೊಡೆದು ಹಾಕುತ್ತಾನೆ. ಕಥೆಯ ಉದ್ದಕ್ಕೂ ಕಂಡುಬರುವು ದೇನು? ಅವನಿಲ್ಲದೆ ಪಾಂಡವರ ಒಂದೂ ಕೆಲಸವೂ ನಡೆಯುವಹಾಗಿಲ್ಲ. ಭಕ್ತರಿಗಾಗಿ ಆತನು ದೂತನಾಗಿ ಬಂದನು; ಅವಮಾನವನ್ನು ಸಹಿಸಿದನು. ಪಾಂಡವರ ವಿಷಯದಲ್ಲಿ ಅಲ್ಲದೆ ಇತರರ ವಿಷಯದಲ್ಲಿಯೂ ಅವನು ಕನಿಕರ ತೋರಿದನು. ಕುಂತಿ, ವಿದುರ, ಧೃತರಾಷ್ಟ್ರ ಇವರೇ ಮುಂತಾ ದವರು ಅವನ ಕೃಪೆಗೆ ಪಾತ್ರರಾದರು. ಭಕ್ತರಿಗೆ ಸುಲಭವಲ್ಲಿಯೇ ಅವನ ದರ್ಶನ ಸಿಕ್ಕುತ್ತದೆ. ಇಲ್ಲವಾದರೆ ದುರ್ಯೋಧನನಿಗೆ ವಿಶ್ವರೂಪ ದರ್ಶನ ದೊರಕವಂತೆ ಇಲ್ಲವೇ ಇಲ್ಲ. ಶ್ರೀಕೃಷ್ಣನು ಭಗವಂತನಾದರೂ ಲೋಕ ವ್ಯವಹಾರವನ್ನು ಬಲ್ಲವನು. ಮರ್ಯಾದೆಯನ್ನು ತಿಳಿದವನು. ಅವನ ಇಲ್ಲಿಯ ನಡತೆ ಮನೆಯ ಹಿರಿಯನಿಗೆ ತಕ್ಕ ನಡತೆಯಾಗಿದೆ. ಅವನಿಲ್ಲದೆ 'ತೃಣಮಪಿ ನ ಚಲತಿ' ಹೌದು; ಕುಮಾರವ್ಯಾಸನ ರಸವಾಣಿಯಿಂದ ಭಾರತ 'ಕೃಷ್ಣ ಚರಿತಾಮೃತವಾಗಿದೆ.'

ಉದ್ಯೋಗಪರ್ವದ ದುರ್ಯೋಧನ ಶಠ. ಪಾಂಡವರ ವಿಚಾರ ವನ್ನು ಎತ್ತಿದರೆ ಸಾಕು ಬೆಂಕಿಯಾಗುತ್ತಾನೆ. ಆ ವಿಷಯದಲ್ಲಿ ಹಿರಿಯರ ಮಾತೆಂದರೆ ಅಸಡ್ಡೆ. ಸಂಜಯನೊಡನೆ ಅವನು ಕಳುಹಿಸಿದ ಸಂದೇ ಶವೇ ಪಾಂಡವರಲ್ಲಿ ಅವನಿಗಿರುವ ತಿರಸ್ಕಾರವನ್ನು ಸೂಚಿಸುತ್ತದೆ. ಶ್ರೀ ಕೃಷ್ಣನಲ್ಲಿ ಅವನಿಗೆ ಭಯಮಿಶ್ರಿತವಾದ ಅಸಡ್ಡೆ, ತಿರಸ್ಕಾರ. ಕೃಷ್ಣನು ಸಂಧಿಗಾಗಿ ಸಭೆಗೆ ಬರಲು ಕೌರವನ ಸಮಯವನ್ನು ತಿಳಿದು ಬರಲು ವಿದುರನ ಮೂಲಕ ಹೇಳಿಕಳುಹಿಸಿದರೆ 'ಐಶ್ವರ್ಯ ವಿಜೃಂಭಣೆ ಅಹಂ ಕಾರಗಳಲ್ಲಿ ಬೀಗಿಹೋದ ಸಕಲ ಧರಿತ್ರೀಕಾಂತನಿಗೆ ಪುರುಷೋತ್ತಮ ಗಿರುಷೋತ್ತಮರ ಲಕ್ಷ್ಯವೇ? ಬಡಪಾಯಾದಿಗಳ ದಿನಗೂಲಿ ತಾನೆ ಆ ದನಕಾಯುವ ಗೊಲ್ಲ; ತಾನು "ಜಗದೊಳಗದ ದುರುದುಂಬಿ ಕುರುಪತಿ. ಚಕ್ರವರ್ತಿಯ ಸಮಯವನ್ನು ಕಾದಿದ್ದು ದರ್ಬಾರಿಗೆ ಬರಲಿ; ಕೊಳ್ಳೆ ಹೋದುದೇನು!' ಎಂದು 'ನಾಳೆ ಬರಹೇಳು' ಎನ್ನುತ್ತಾನೆ. ಸಹಸ್ರ ಕೈಗಳಲ್ಲಿ ಲೋಕಕ್ಕೆ ಐಶ್ವರ್ಯವನ್ನು ದಾನಮಾಡುವ ಲಕ್ಷ್ಮೀಕಾಂತ ನೆದುರು ವೈಭವವನ್ನು ಪ್ರದರ್ಶಿಸಿ ಬೀಗಿ ಮೆರೆದ ಇವನಿಗೆ ಸೆಣಸು ಸೇರದ ದೇವನಿಂದ ತಕ್ಕ ಮರ್ಯಾದೆಯಾಯಿತು. ಆದರೂ ಕೃಷ್ಣನ ಮಹಿಮೆ ಯನ್ನರಿತ ಇವನು ಸಂಬಂಧದ ಮಾತನ್ನೆತ್ತಿ ಯಾದವಸೈನ್ಯವನ್ನು ತನ್ನೊ ಳಗುಮಾಡಿಕೊಂಡನು. ಜೋಡೆಯಲಿ ಜನಿಸಿದ, ಜಾರೆಯ ಮಕ್ಕಳಿಗೆ

ಈ ಗೋಪೀ ಜಾರ ಜೀವ ಎಂದರಿತು ಅವನನ್ನು ಬಿಗಿಯಲು ಯತ್ನಿಸಿದನು. ಕೃಷ್ಣನು ದೇವರೆಂದರಿತ ಇವನು ಜಯವಿಜಯರ ಗುಂಪಿಗೆ ಸೇರಿದವನು. ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲವೆಂಬುದು ಇವನಿಗೆ ಚೆನ್ನಾಗಿ ಗೊತ್ತು. ದುರ್ಯೋಧನನಿಗೆ ಮಂತ್ರಿಗಳು ಶಕುನಿ ಚಪಲಕರ್ಣ. ಅವನು ಕಥೆಯ ಉದ್ದಕ್ಕೂ ಶಠ; ಆದರೂ ಅವನಲ್ಲಿರುವ ಮಣಿದು ಬದುಕದ, ಹಗೆಯಲಿ ಸೆಣಸಿ ಬಿಡದ ಛಲವನ್ನು ಬಾಯಿತುಂಬ ಹೊಗಳಲೇ ಬೇಕು.

ಒಲಿದರೆ ಉಜ್ಜೀವಿಸುವ, ಮುನಿದರೆ ತಲೆಯ ಬರಹವನ್ನು ತೊಡೆಯುವ ಪ್ರತಿಜ್ಞೆ ಶ್ರೀಕೃಷ್ಣನದಲ್ಲವೇ? ಆದ್ದರಿಂದಲೇ ಅವನು ಭಜಕರಿಗೆ ಬೆಂಬಳಿಯ ಬಿರುದನಾಗಿ ನಿಂತು ಭೇದದಲಿ ಕುರುಕುಲವನ್ನು ಕೊಂದದ್ದು. ಕೃಷ್ಣನು ಕರ್ಣನನ್ನಾಗಲೀ, ಕರ್ಣನು ಕೃಷ್ಣನನ್ನಾಗಲೀ ಈ ಮೊದಲೇ ಎಂದೂ ಸಂಧಿಸಿದುದಿಲ್ಲ. ಆದರೆ ಸಂಧಿ ಮುರಿದೊಡನೆಯೇ ತನ್ನೊಡನೆ ಬರುತ್ತಿದ್ದ ಎಲ್ಲರನ್ನೂ ಬೀಳ್ಕೊಟ್ಟು ಕರ್ಣನನ್ನು ಮಾತ್ರ 'ಬಂದು ಕಿರಿದೆಡೆಗಾಗಿ ಕಳುಹುವುದೆಂದು ಮುರವೈರಿ ಸೂಚಿಸಿದನು. ಕರ್ಣ ತನ್ನ ಮಾತನ್ನು ಗೌರವಿಸಿ ತನ್ನೆಡೆಗೆ ಬರುತ್ತಲೇ ಇನತನೂಜನೊಡನೆ ಮೈದುನತನದ ಸರಸವನ್ನೆಸಗಿ, ಅವನನ್ನು ಕೆಲಕ್ಕೆ ಬರಸೆಳೆದು ಅವನ ಕರತಳವನ್ನಿಕ್ಕಿ ಕುಲದ ಮಾತೆತ್ತಿದನು; ಸುಯೋಧನನಲ್ಲಿ ಸೇವೆ ಉಚಿತವಲ್ಲ ಎಂದನು. ಕೃಷ್ಣನ ಮಹಿಮೆಯನ್ನು ಈ ಮೊದಲೇ ಸಾಕಷ್ಟು ತಿಳಿದಿದ್ದ ಕರ್ಣನಿಗೆ ಅವನ ವಿಷಯದಲ್ಲಿ ಸಂಶಯ. ಅಲ್ಲದೆ ಅವನ ಸಲಿಗೆ, ಅವನಾಡಿದ ಕುಲದ ಮಾತು ಕರ್ಣನ ಸಂಶಯವನ್ನು ಇಮ್ಮಡಿಸಿದವು. ನನಗೆ ನಿಮ್ಮಡಿಗಳಲ್ಲಿ ಸರಿಸೇವನೆ ಸಲ್ಲದು, ಅಂಜುವೆನು ಎಂದು ಕರ್ಣ ಹೇಳಿದರೆ ಕೃಷ್ಣನು ಸುಮ್ಮನೆ ಬಿಡಲಿಲ್ಲ. ತೊಡೆಸೊಂಕಿನಲ್ಲಿ ಸಾರಿ, ಶೌರಿ ಆ 'ವರಭಾನುವಂಶಲಲಾಮಂಗೆ' ಅವನ ಉತ್ಪತ್ತಿ, ಪಾಂಡವರ ಹಿರಿಯ ಅವನಾಗಿರುವುದು, ಚಕ್ರವರ್ತಿಯಾದರೆ ಅವನ ವೈಭವ, ಎಲ್ಲಕ್ಕೂ ಮಿಗಿಲಾಗಿ "ಧಾರಿಣೀಪತಿಯಾಗಿ ನೀನಿರೆ ವೈರವಿತ್ತಂಡಕ್ಕೆ ಒಳಕಿಲ್ಲ ನಿನ್ನ ವೈಭವಕೆ ಆರುಸರಿಯೈ ಕರ್ಣ ಪಾಂಡವರೈವರನು ನಿನ್ನಯ ಪದಕೆ ಕೆಡಹುವೆನು ಬಹುದೆನ್ನ ಸಂಗಾತ" ಎಂದು ಅವನು ಉಸಿರೆತ್ತದಂತೆ ಹೇಳಿದನು. ಕೃಷ್ಣನ ಮಾತನ್ನು ಕೇಳುತ್ತಿದ್ದ ಕರ್ಣನ ಮನಸ್ಸಿನಲ್ಲುಂಟಾದ ಭಾವಗಳನ್ನು ಹೇಳಬಲ್ಲವ

ರಾರು ? ಸಾಕ್ಷಾತ್ ಲಕ್ಷ್ಮೀಕಾಂತನೇ ಬಂದು ಬೋಧೆ ಮಾಡುತ್ತಿರುವಾಗ ಅವನ ಬೋಧೆಗೆ ಕಿವಿಗೊಡದವರಾರು ? ಆದರೆ ಕರ್ಣನಿಗೆ ಹಾಗಾಗಲಿಲ್ಲ ಅವನ ಮನಸ್ಸಿನಲ್ಲಿ ಉಂಟಾದ ಯೋಚನೆಗಳು ಎರಡು. ಮೊದಲನೆಯ ದಾಗಿ ಹರಿಯ ಹಗೆ ಸಾಮಾನ್ಯವಾದುದಲ್ಲ. ಈ ಗೋಪಾಲ ಜೀವವ ಕೊಳ್ಳದೆ ಬರಿದೇ ಬಿಡನು. ಎರಡನೆಯದಾಗಿ ತನ್ನ ಕುಲವನ್ನು ಅರುಹಿ ಪಾಂಡವರನ್ನು ಉಳಿಸಿ ಕೌರವರನ್ನು ಕೊಂದ. ತನ್ನ ಸಾವೇ ಕೃಷ್ಣನ ಮಾತಿಗೆ ಮದ್ದೆಂದು ಬಗೆದ ಕರ್ಣನು ಚಕ್ರವರ್ತಿಯ ವೈಭವವನ್ನು ಹೇಳಿದ ಕೃಷ್ಣನಿಗೆ ಪ್ರತಿಯಾಗಿ ದುರ್ಯೋಧನನು ತನಗೆ ತೋರಿಸು ತ್ತಿರುವ ಮರ್ಯಾದೆಯನ್ನು ವರ್ಣಿಸಿ 'ನಾಳಿನ ಭಾರತ ಯುದ್ಧದಲ್ಲಿ ನಾನು ಯಜ್ಞದೀಕ್ಷಿತ. ಸ್ವಾಮಿಋಣವನ್ನು ತೀರಿಸಿ ಸಾಯುತ್ತೇನೆ. ಆದರೆ ನಿನ್ನ ಧೀರರೈವರನ್ನು ನೋಯಿಸುವುದಿಲ್ಲ. ನಾನು ಎರಡು ಪಕ್ಷದ ವರಿಗೂ ವೈರಮುಸೆದಿರುವ ಈ ಸಮಯದಲ್ಲಿ ಸಂಧಿಮಾಡುವುದಿಲ್ಲ. ಏಕೆಂದರೆ ವಿಸಸನದ ಕಟ್ಟಾಳು ಮಂತ್ರವನೆಸಗಲಾಗದು. ಹಾಗೆ ಮಾಡಿ ದರೆ ತನ್ನ ಬೀರಕೆ ಮಸುಳಹುದು' ಎಂದು ಕೃಷ್ಣನಿಗೆ ಖಂಡಿತವಾಗಿ ಉತ್ತರ ಕೊಡುತ್ತಾನೆ. ಇಲ್ಲಿ ಕರ್ಣನ ದೃಢತೆ, ಸ್ವಾಮಿಭಕ್ತಿ, ಕರ್ತವ್ಯ ನಿಷ್ಠೆ, ಇವು ಒಂದನ್ನೊಂದು ಮೀರಿಸಿವೆ. ಇಲ್ಲಿ ನಮಗೆ ಕಂಡುಬರುವವನು 'ಚಪಲಕರ್ಣ' ನಲ್ಲ. ಸ್ಥಿರಪ್ರತಿಜ್ಞನಾದ ಕರ್ಣ. ಭಾರತದಲ್ಲಿ ಕರ್ಣ ಭೇದದ ದೃಶ್ಯಹೃದಯ ವಿದ್ರಾವಕವಾಗಿದೆ. 'ಕರ್ಣನೇಱು, ಕರ್ಣನ ಕಡುನನ್ನಿ, ಕರ್ಣನ ಆಳವು, ಅಂಕದ ಕರ್ಣನ ಚಾಗ' ದಿಂದ ತಾನೆ ಕರ್ಣ ರಸಾಯನಮಲ್ತೆ ಭಾರತಂ'

ಈ ಪರ್ವದ ಪ್ರಧಾನರಸ ವೀರವೆಂದು ಹೇಳಿದರೆ ತಪ್ಪಾಗಲಾರದು. ಪಾಂಡವರ ಸಂದೇಶವನ್ನು ತಂದ ಸಂಜಯನ ಮಾತುಗಳಲ್ಲಿ ಭೀಮನ ವೀರಾಲಾಪಗಳಲ್ಲಿ ಅದು ಉಕ್ಕಿ ಹರಿಯುತ್ತದೆ. ವಿಶ್ವರೂಪ ದರ್ಶನದ ಸಂದರ್ಭದಲ್ಲಿ ಅದ್ಭುತರಸವನ್ನೂ, ಕರ್ಣಭೇದದಲ್ಲಿ ಕರುಣ ರಸವನ್ನೂ ಕಾಣಬಹುದು. ಶ್ರೀ ಕೃಷ್ಣನ ಮಹಿಮೆಯನ್ನು ವರ್ಣಿಸಬೇಕಾದ ಸಂದರ್ಭಗಳಲ್ಲಿ ಕವಿ ಭಕ್ತಿರಸದ ಪ್ರವಾಹವನ್ನೇ ಹರಿಯಿಸಿ ಬಿಡುತ್ತಾನೆ.

ಕುಮಾರವ್ಯಾಸನ ಹಿತಮಿತವಾದ ವರ್ಣನೆಗಳ ಸೊಗಸು, ಅವನು ರೂಪಕಗಳನ್ನು ಬಳಸುವ ರೀತಿ, ಸಂಭಾಷಣೆಯ ಕೌಶಲ, ಕವಿಯ ನೂತನ ಭಾವಗಳ ಮತ್ತು ಶೈಲಿಯ ಸೊಗಸು ಇವುಗಳನ್ನು ವರ್ಣಿಸಲು

ಇಲ್ಲಿ ಅವಕಾಶವಿಲ್ಲ. ಭಾರತದ ಈ ಭಾಗವನ್ನು ಓದಿದರೆ ಕಾವ್ಯದ ಉತ್ಕೃಷ್ಟತೆ, ಕವಿಯ ಹಿರಿಮೆ ತಿಳಿದುಬರುತ್ತದೆ. ಉದ್ಯೋಗಪರ್ವದ ವಿಷಯದಲ್ಲಿ ಆರ್ಯೋಕ್ತಿಯು ಇಷ್ಟೇ ಅಲ್ಲವೆ ?

**ಭಾರತೇ ಸಾರಮುದ್ಯೋಗಃ**

ಕನ್ನಡ ಮಹಾಭಾರತ

# ಉದ್ಯೋಗಪರ್ವ ಸಂಗ್ರಹ

## ೧. ಮಂಗಳಾಚರಣೆ

ಶ್ರೀವನಿತೆಯರಸನೆ ವಿಮಲ ರಾ
ಜೀವಪೀಠನ ಜನಕ ಜಗಕತಿ
ಪಾವನನೆ ಸನಕಾದಿ ಸಜ್ಜನನಿಕರದಾತಾರ ।
ರಾವಣಾಸುರಮಥನ ಶ್ರವಣಸು
ಧಾವಿನೂತನಕಥನಕಾರಣ
ಕಾವುದಾನತ ಜನವ ಗದುಗಿನ ವೀರನಾರಯಣ ॥ ೧

ವೀರನಾರಾಯಣನೆ ಕವಿ ಲಿಪಿ
ಕಾರ ಕುವರವ್ಯಾಸ ಕೇಳುವ
ಸೂರಿಗಳು ಸನಕಾದಿಗಳು ಜಂಗಮುಜನಾರ್ದನರು ।
ಚಾರುಕವಿತೆಯು ಬಳಕೆಯಲ್ಲ ವಿ
ಚಾರಿಸುವಡಳವಲ್ಲ ಚಿತ್ತವ
ಧಾರು ಹೋ ಸರ್ವಜ್ಞರಾದರು ಸಲುಗೆ ಬಿನ್ನಪವ ॥ ೨

ತಿಣಿಕಿದನು ಫಣಿರಾಯ ರಾಮಾ
ಯಣದ ಕವಿಗಳ ಭಾರದಲಿ ತಿಂ
ಥಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ ।
ಬಣಗು ಕವಿಗಳ ಲೆಕ್ಕಿಪನೆ ಸಾ
ಕೆಣಿಸದಿರು ಶುಕರೂಪನಲ್ಲದೆ
ಕುಣಿಸಿ ನಗನೇ ಕವಿ ಕುಮಾರವ್ಯಾಸನುಳಿದವರ ॥ ೩

ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ ।

ಬಳಸಿ ಬರೆಯಲು ಕಂಠಪತ್ರದೊ
ಳುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ ‖ ೪

ಅರಸುಗಳಿಗಿದು ವೀರ ದ್ವಿಜರಿಗೆ
ಪರಮ ವೇದದ ಸಾರ ಯೋಗೀ
ಶ್ವರರ ತತ್ತ್ವವಿಚಾರ ಮಂತ್ರೀಜನಕೆ ಬುದ್ಧಿಗುಣ ।
ವಿರಹಿಗಳ ಶೃಂಗಾರ ವಿದ್ಯಾ
ಪರಿಣತರಲಂಕಾರ ಕಾವ್ಯಕೆ
ಗುರುವೆನಲು ರಚಿಸಿದ ಕುಮಾರವ್ಯಾಸ ಭಾರತವ ‖ ೫

ವೇದಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನ ಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗಫಲ ।
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ ‖ ೬

## ೨. ಸಾರಥಿತನವ ಕೈಕೊಂಡನು

ಕೇಳು ಜನಮೇಜಯಧರಿತ್ರೀ
ಪಾಲ ಕುಂತೀತನಯರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯಸಿಂಧುವಲಾ ।
ಶ್ರೀಲತಾಂಗಿಯ ರಮಣನೈವರೊ
ಳಾಳೊಡೆಯರಾರೆಂಬ ಭೇದವ
ಬೀಳುಕೊಟ್ಟೇ ನಡಸುತಿರ್ದನು ತನ್ನ ಮೈದುನರ ॥ ೧

ಹೋಲಿಕೆಗೆ ಬಾಯ್ಬಿಡುವ ವೇದದ
ತಾಳಿಗೆಗಳೊಣಗಿದವು ಘನತೆಯ
ಮೇಲೆ ತನ್ನದು ಘನತೆಯೆಂಬುದನತ್ತ ಬೇಱಿರಿಸಿ ।
ಕಾಲಿಗೆಱಗುವನಾ ಯುಧಿಷ್ಠಿರ
ನೇಳಲೊಡನೇಳುವನು ಕೃಷ್ಣನ
ಲೀಲೆಯನುಪಮವೆಂದು ವೈಶಂಪಾಯಮುನಿ ನುಡಿದ ॥ ೨

ಒಂದು ದಿನ ಒಡ್ಡೋಲಗಕ್ಕೈ
ತಂದು ಸಿಖಿಳಾವನಿಯ ರಾಯರ
ಮುಂದಿಯಲಿ ಮುರವೈರಿ ನುಡಿದನು ರಾಜಕಾರಿಯವ ।
ಹಿಂದೆ ಜೂಜಿನ ವಿಲಗದಲಿ ಮನ
ನೊಂದರಿವರಡವಿಯಲಿ ಧರೆಗಿ
ನ್ನೆಂದು ಸೇರುವರೇನು ಹದನೀ ಪಾಂಡುತನಯರಿಗೆ ॥ ೩

ದೇವ ನೀನೇ ಬಲ್ಲೆ ನಿನ್ನಯ
ಭಾವನೀ ಧರ್ಮಜನ ಬಹುಮಾ
ನಾವಮಾನದ ಹೊಱಿಗೆ ನಿನ್ನದು ಹರಣಭರಣವನು ।
ನೀವು ಬಲ್ಲಿರಿ ಕಾಲಲೊದೆದುದ
ನೋವಿ ತಲೆಯಲಿ ಹೊತ್ತು ನಡಸುವ
ಡಾವು ಬಲ್ಲೆವು ಜೀಯ ಎಂದನು ದ್ರುಪದ ಭೂಪಾಲ ॥ ೪

ಕಳುಹುವುದು ಶಿಷ್ಟರನು ಧರಣೀ
ತಳವ ಬೇಡಿಸುವಲ್ಲಿ ಸಾಮವ
ಬಳಸುವದು ಭೀಷ್ಮಾದಿಗಳಿಗಟ್ಟುವುದು ವಿನಯದಲಿ ।

ತಿಳಿವುದಾತನ ನೆಲೆಯನಲ್ಲಿಂ
ಬಳಿಕ ನಯವಿಲ್ಲೆಂಬಡಾಹವ
ದೊಳಗೆ ಕೈದೋಱುವುದು ಮತವೆಂದನು ಮುರಧ್ವಂಸಿ ॥ ೫

ಮದುವೆಗೋಸುಗ ಬಂದೆವಾವಿಂ
ದಿದಱ ಮೇಲಣ ರಾಜಕಾರ್ಯದ
ಹದನನಱಿಪುವುದಟ್ಟಿದಡೆ ಬಹೆವಾವು ವಹಿಲದಲಿ ।
ಹದುಳವಿಹುದೆಂದಸುರರಿಪು ಕರು
ಣದಲಿ ಕೌಂತೀಸುತರನಾ ದ್ರೌ
ಪದಿಯನಭಿಮನ್ಯುವ ಸುಭದ್ರೆಯ ಹರಸಿ ಬೀಳ್ಕೊಂಡ ॥ ೬

ಕೂಡಿಕೊಂಡಿಹುದಿವರು ಮಕ್ಕಳು
ನೋಡಲಾಗದು ಹೆಚ್ಚು ಕುಂದನು
ಸಾಡ ಬೇಡಲು ಬುದ್ಧಿವಂತರನಲ್ಲಿಗಟ್ಟುವುದು ।
ಕೂಡೆ ಸೋದಿಸಿ ಸೆಜ್ಜೆಯಲಿ ಮೈ
ಗೂಡಿ ಆರೋಗಣೆಗಳಲಿ ಮನ
ಗೂಡಿ ಬೆರಸಿಹುದೆಂದು ದ್ರುಪದ ವಿರಾಟರಿಂಗೆ ನುಡಿದ ॥ ೭

ಎಂದು ಕಳುಹಿಸಿಕೊಂಡು ನಾರೀ
ವೃಂದ ಯದುಬಲಸಹಿತ ದೇವ ಮು
ಕುಂದ ಬಿಜಯಂಗೈದನತ್ತಲು ದ್ವಾರಕಾಪುರಿಗೆ ।
ಒಂದುದಿನವಾಲೋಚನೆಯ ನೆಲೆ
ಯಿಂದ ಕರೆದು ಪುರೋಹಿತನ ನಲ
ವಿಂದ ಕಳುಹಿದ ದ್ರುಪದನಾ ಕೌರವನ ಪಟ್ಟಣಕೆ ೮

ಓಲೆಯುಡುಗೊಱೆಸಹಿತ ಧರಣೀ
ಪಾಲರಿಗೆ ಪಾಂಡವರ ಶಿಷ್ಟರು
ಕಾಳಗಕೆ ಬಲವಾಗಲೋಸುಗ ಕರೆದರಲ್ಲಲ್ಲಿ ।
ಆಳುಕುದುರೆಯು ನೆರಹಿ ಬಂದರು
ಮೂಲೆಯರಸುಗಳೆಲ್ಲ ಕುರುಭೂ
ಪಾಲನಲ್ಲಿಗೆ ಕೆಲರು ಕೆಲಬರು ಪಾಂಡವರ ಪೊರೆಗೆ ॥ ೯

ಧರಣಿಯೆಡೆಗಿಡೆ ರಾಯಮೋಹರ
ತೆರಳಿತಿಬ್ಬರು ರಾಯರಿಗೆ ಕೈ
ನೆರವ ತೋಱಲು ಕವಿದು ಬಂದುದು ಕಾಣೆನಳತೆಗಳ ।
ಅರಿಗಳತಿಹೆಚ್ಚಿದರು ವೈಮಱ
ದಿರಲು ಮಹಿಮೆಗಮಾನ್ಯವಹುದಿ
ನ್ನರವಣಿಸಬೇಕೆಂದು ಕೌರವರಾಯ ಚಿಂತಿಸಿದ ॥ ೧೦

ಹದನನಾಪ್ತರಿಗಱುಹಿದನು ಗುಪಿ
ತದಲಿ ಕೃಷ್ಣನನೊಳಗುಮಾಡುವ
ಮುದದಿ ಕೌರವ ಬಂದನಂದಾ ದ್ವಾರಕಾಪುರಿಗೆ ।
ಅದನು ಭೇದಿಸಿ ಬೇಹಿನವರಱು
ಹಿದರು ಕುಂತೀಸುತರಿಗತಿ ವೇ
ಗದಲಿ ಧರ್ಮಜನಳುಕಿ ಕಳುಹಿದನಿಂದ್ರನಂದನನ ೧೧

ಬೀಳುಕೊಂಡರ್ಜುನನು ಲಕ್ಷ್ಮೀ
ಲೋಲನಲ್ಲಿಗೆ ಬರುತ ಕಂಡನು
ಲೀಲೆಯಲಿ ನರ್ತಿಸುವ ನವಿಲನು ಬಲದೊಳಡಹಾಯ್ದು ।
ಮೇಲೆ ಹಂಗನ ಬಲವ ಹರಿಣೀ
ಜಾಲದೆಡನನು ತಿದ್ದುವಲ್ಲಿ ವಿ
ಶಾಲಶಕುನವನಾಲಿಸುತ [ದ್ವಾರಕಿಗೆ] ನಡೆತಂದ ॥ ೧೨

ಅಟ್ಟಿ ಬಳಲಿದ ಶ್ರುತಿಗೆ ಹರಿ ವೈ
ಗೊಟ್ಟ ಠಾವಿದು ತಾಪಸರು ಜಪ
ಗುಟ್ಟ ಜಿನುಗಿದಡವರನುಜ್ಜೀವಿಸಿದ ತಾಣವಿದು ।
ಹುಟ್ಟುಸಾವಿನ ವಿಲಗ ಜೀವರ
ಬಿಟ್ಟ ಠಾವಿದು ಕಾಲಕರ್ಮದ
ಥಟ್ಟು ಮುಱಿವಡೆದೋಡಿದೆಡೆಯಿದು ಶಿವ ಶಿವಾ ಎಂದ। ೧೩

ಹೊಗಳುತರ್ಜುನನಸುರರಿಪುವಿನ
ನಗರಿಗೈತಂದರಮನೆಗೆ ಬರ
ಲಗಧರನು ಮಂಚದಲಿ ನಿದ್ರಾಂಗನೆಯ ಕೇಳಿಯಲಿ ।

ಸೊಗಸು ಮಿಗಲರೆದೆಱೆದ ಲೋಚನ
ಯುಗಳ ಸಮತಳಿಸಿದ ಸುಷುಪ್ತಿಯ
ಬಿಗುಹಿನಲಿ ಪರಮಾತ್ಮನೆಸೆದನು ಭ್ರಾಂತಿಯೋಗದಲಿ || ೧೪

ಮುಕುಳಕರಪುಟನಾಗಿ ಭಯಭರ
ಚಕಿತಚಿತ್ತಶರೀರನಬುಜಾಂ
ಬಕನನೆಬ್ಬಿಸಲಮ್ಮದೊಯ್ಯನೆ ಚರಣಸೀಮೆಯಲಿ ।
ಅಕುಟಿಲನು ಸಾರಿದನು ಬಳಿಕಾ
ವಿಕಳ ದುರ್ಯೋಧನನು ನಿಗಮ
ಪ್ರಕರ ಮೌಳಿಯು ಮೌಳಿಯತ್ತಲು ಸಾರ್ದು ಮಂಡಿಸಿದ ||೧೫

ಇರಲು ನಿಮಿಷದೊಳಸುರರಿಪು ವ್ರೈ
ಮುರಿದನುಪ್ಪವಡಿಸಿದನಿದಿರಲಿ
ಸುರಪತಿಯು ಸೂನುವನು ಕಂಡನು ನಗೆಯ ಮೊಳೆ ಮಿನುಗೆ ।
ತಿರುಗಿ ನೋಡುತ ತಲೆಯ ದೆಸೆಯಲಿ
ಕುರುಕುಲೇಶ್ವರನತಿ ವಿಕಾರತೆ
ಯಿರವ ಕಂಡನಿದೇನಿದೇನೆಂದಸುರರಿಪು ನುಡಿದ || ೧೬

ವೀಳೆಯವ ತಾ ಕೊಂಡು ಕುರುಭೂ
ಪಾಲ ಪಾರ್ಥರಿಗಿತ್ತು ಲಕ್ಷ್ಮೀ
ಲೋಲ ನುಡಿಸಿದನುಭಯರಾಯರಿಗಿತ್ತ ಬರವೇನು ।
ಹೇಳಿರೈ ಬರವಘಟಿತವಲಾ
ಮೇಳವೇ ಕಡುಮಾನ್ಯರೆಮ್ಮಾ
ಯಾಲಯಕೆ ಬರವೇನೆನಲು ಕುರುರಾಯನಿಂತೆಂದ || ೧೭

ಯಾದವರು ಕೌರವರೊಳುಂಟೇ
ಭೇದವಾವೈತಂದರೆಮ್ಮೊಳ
ಗಾದ ಲಾಘವವೇನು ನಿಮ್ಮವೊಲಾರು ಸಖರೆಮಗೆ ।
ಸೋದರರ ಮನ ಕದಡಿದವು ದಾ
ಯಾದವಿಷಯದಲಿನ್ನು ಧರಣಿಗೆ
ಕಾದುವೆವು ನಮ್ಮಿಬ್ಬರಿಗೆ ಬಲವಾಗಬೇಕೆಂದ || ೧೮

ಕೌರವೇಶ್ವರ ಕೇಳು ಧರಣೀ
ನಾರಿ ಯಾರೊಡನೊಕ್ಕತನವಿ
ದ್ದಾರ ಮೆಚ್ಚಿದಳಾರ ಸಂಗಡವುರಿಯ ಹಾಯಿದಳು ।
ಭೂರಿಮಮಕಾರದಲಿ ನೃಪರು ವಿ
ಚಾರಿಸದೆ ಧರೆ ತಮ್ಮದೆಂದೇ
ನಾರಕದ ಸಾಮ್ರಾಜ್ಯಕೈದುವರೆಂದು ಹರಿ ನುಡಿದ ॥ ೧೯

ನಾಡಿಗೋಸುಗ ಸೋದರರು ಹೊ
ಯ್ದಾಡಿ ಹಱಿಹಂಚಾದರೆಂಬುದ
ನಾಡದಿಹುದೇ ಲೋಕ ಕಮಲಜನುಸಿರಿಹನ್ನೆಬರ ।
ಬೇಡ ಖತಿ ನಿಮ್ಮೊಳಗೆ ನೀವ್ ಕೈ
ಗೂಡಿ ಬದುಕುವುದೊಳ್ಳಿತದ ನೆಱೆ
ನೋಡಿ ಸಂತಸಬಡುವೆನೆಂದನು ದಾನವಧ್ವಂಸಿ ॥ ೨೦

ತಗರೆರಡ ಖತಿಗೊಳಿಸಿ ಬಲುಗಾ
ಳಗವ ನೋಡುವರಂತೆ ನಿಮ್ಮನು
ತೆಗೆತೆಗೆದು ಕಲಿಮಾಡಿ ಬಿಡುವರು ಖುಲ್ಲರಾದವರು ।
ನಗುತ ಹೆಱೆಹಿಂಗುವರು ಹಿಸುಣರು
ಬಗುಳಿದವದಿರು ಬಳಿಕ ಕಡೆಯಲಿ
ಹೊಗುವಿರೈ ನೀವಿಬ್ಬರಪಕೀರಿತಿಯ ಹಾದರಕೆ ॥ ೨೧

ಅವಧರಿಸು ಮುರವೈರಿ ಧರ್ಮ
ಶ್ರವಣಕೋಸುಗ ಬಾರೆವಾವ್ ಪಾ
ರ್ಥಿವರ ಪಂಥದ ಕದನವಿದ್ಯಾಕಾಮವೆಮಗಾಯ್ತು ।
ನಿವಗೆ ನಾವಿತ್ತಂಡ ಸರಿ ಪಾಂ
ಡವರಿಗೆಯು ಮನದೊಲವಿನಲಿ ಕೌ
ರವರಿಗೆಯು ಬಲವಾಗಬೇಕೆಂದನು ಸುಯೋಧನನು ॥ ೨೨

ಎನಲು ತಂಬುಲ ಸೂಸೆ ನಗುತ
ರ್ಜುನನ ನೋಡಿದನಸುರರಿಪು ನಿ
ನ್ನನುವ ಹೇಳೈ ಪಾರ್ಥಯೆನೆ ತಲೆವಾಗಿ ಕೈಮುಗಿದು ।

ಎನಗೆ ಮತ ಬೇಱೇನು ದುರ್ಯೋ
ಧನನ ಮತವೇ ತನ್ನ ಮತ ನಿ
ಮ್ಮನುನಯವೆ ನಯವೆನ್ನೊಳೀ ಸ್ವಾತಂತ್ರ್ಯವಿಲ್ಲೆಂದ ॥ ೨೩

ಆದಡಾವಿಹೆವೊಂದು ಕಡೆಯಲಿ
ಕಾದುವವರಾವಲ್ಲ ಬಲನಾ
ಯಾದವರು ಕೃತವರ್ಮ ನಾರಾಯಣ ಮಹಾಸೇನೆ ।
ಕಾದುವವರಿವರೊಂದು ದೆಸೆ ಎರ
ಡಾದುದಿದಱಲಿ ಮೆಚ್ಚಿದುದ ನೀ
ಸಾದರಿಸಿ ವರಿಸೆಂದು ಪಾರ್ಥಂಗಸುರರಿಪು ನುಡಿದ ॥ ೨೪

ಮುರಮಥನ ಬಿನ್ನಹವು ಕೌರವ
ರರಸನತಿಸಿರಿವಂತನಿದ ಸಂ
ತರಿಸಲಾಪನು ಬಹುಳ ಯಾದವ ಸೈನ್ಯಸಾಗರವ ।
ಧರೆಯ ಸಂಪದವಿಲ್ಲದಡವಿಯ
ತಿರುಕರಾವೆಮಗಿನ್ನಿಬರನು ಸಂ
ತರಿಸಲಪ್ಪುದೆ ಕೃಷ್ಣ ನೀನೇ ಸಾಕು ನಮಗೆಂದ ॥ ೨೫

ನಾವು ಬಡವರು ಬಡವರಿಗೆ ದಿಟ
ನೀವು ಬೆಂಬಲವೆಂಬ ಬಿರುದನು
ದೇವ ಕೇಳಿದು ಬಲ್ಲೆನೆಂದನು ಪಾರ್ಥ ಕೈಮುಗಿದು ॥
ನೀವು ಸುಖದಲಿ ಪಾಂಡವರನು
ಜ್ಜೀವಿಸುವುದೆಮಗುಳಿದ ಯದುಭೂ
ಪಾವಳಿಯ ಕೃಪೆಮಾಡಿಯೆಂದನು ಕೌರವರ ರಾಯ ॥ ೨೬

ಮಱೆಯ ಮಾತುಗಳೇಕೆ ಪಾಂಡವ
ರೆಱಕ ನಿಮ್ಮಲಿ ಹಿರಿದು ಪಾರ್ಥಗೆ
ಮಱುಗುವಿರಿ ಮಿಗಿಲಾಗಿ ಮನಮೆಚ್ಚುಂಟು ನಿಮ್ಮೊಳಗೆ ।
ಉಱುವ ಕಾರ್ಯಕೆ ಕಡೆಯಲಾವೇ
ಹೊಱಗು ಸಾಕಂತಿರಲಿ ನೀವ್ ಹೊ
ಕ್ಕೆಱೆಯಲಾಗದು ಮತ್ತೆಯಿದನೇ ಬೇಡಿಕೊಳ್ಳುವೆನು ॥ ೨೭

ಹಸುಳೆತನ ಮೊದಲಾಗಿ ಬಲು ರ
ಕ್ಕಸರೊಡನೆ ತಲೆಯೊತ್ತಿ ರಣದಾ
ಯಸವ ಸೈರಿಸಿ ಹೊಯ್ದು ಕೊಂದೆವು ಕೋಟಿ ದಾನವರ ।
ಮಿಸುಕಲಾಱೆವು ಚಕ್ರ ಭಂಡಾ
ರಿಸಿತು ಮುನ್ನಿನ ಜವನದ ಬಲ
ಮಸುಳಿತಾವುಂಡಾಡಿಭಟ್ಟರು ನೃಪತಿ ಕೇಳೆಂದ ॥ ೨೮

ಎನಲು ಬಲು ಲೇಸೆಂದು ಕೌರವ
ಜನಪ ಕಳುಹಿಸಿಕೊಂಡು ಬಲರಾ
ಮನನು ಕೃತವರ್ಮನನು ಕಂಡನು ನಿಖಿಳಯಾದವರ ।
ಇನಿತು ಬಲಸಹಿತೊಲವಿನಲಿ ಹ
ಸ್ತಿನಪುರಕೆ ಮರಳಿದನು ಬಳಿಕೀ
ದನುಜರಿಪು ನಸುನಗುತಲಿಂತೆಂದನು ಧನಂಜಯಗೆ ॥ ೨೯

ಸುರಗಿಯನು ಬಿಸುಟೋಱೆಯನಂಗೀ
ಕರಿಸಿದವೊಲಾಹವದ ಧುರ
ಧುರದ ಯಾದವಬಲವನೊಲ್ಲದೆ ಮಂದಮತಿಯಾಗಿ ।
ಮರುಳೆ ಕಾದದ ಕಟ್ಟದೆವ್ಮನು
ಬಱಿದೆ ಬಯಸಿದೆ ಇದನು ಕೇಳ್ದಡೆ
ಮರುಳುಗುಟ್ಟದೆ ಮಾಣರೇ ನಿಮ್ಮಗ್ರಜಾನುಜರು ॥ ೩೦

ಎನಲು ಗಹಗಹಿಸಿದನಿದಾರಿಗೆ
ಮನವ ಕದ್ದಾಡುವಿರಿ ನಿಜಶಿ
ಷ್ಯನಲಿ ನೋಟಕದಿಂದ್ರಜಾಲವೆ ನಿಮ್ಮ ಗರುಡಿಯಲಿ
ಎನಗೆ ಶ್ರಮವುಂಟದು ನಿಲಲಿಯೆ
ನ್ನನುಜರಗ್ರಜರಱಿಯರೇ ನಿ
ಮ್ಮನುಪಮಿತಮಹಿಮಾವಲಂಬನವೆಂದನಾ ಪಾರ್ಥ ॥ ೩೧

ನಾವು ಬಱಿಗೈಯವರು ಬರಲೆಮ
ಗಾವುದಲ್ಲಿಯು ಕೆಲಸವುಂಡುಂ
ಡಾವು ಕುಳ್ಳಿಹರಲ್ಲ ಹಂಗಾಗಿರೆವು ಕಟಕದಲಿ ।

ದೇವರೆಂದೇ ನೀವು ಬಗೆವಿರಿ
ದೇವತನವೆಮಗಿಲ್ಲವೆಂಬುದ
ನಾವು ಬಲ್ಲೆವು ಬಂದು ಮಾಡುವುದೇನು ಹೇಳೆಂದ ॥ ೩೨

ದೇವ ಮಾತ್ರವೆ ನೀವು ದೇವರ
ದೇವರೊಡೆಯರು ಹೊಗಳುವಡೆ ವೇ
ದಾವಳಿಗಳಳವಲ್ಲ ಸಾಕಾ ಮಾತದಂತಿರಲಿ ।
ನಾವು ಭಕ್ತರು ಭಕ್ತಭೃತ್ಯರು
ನೀವು ಸಾರಥಿಯಾಗಿ ನಮ್ಮನು
ಕಾವುದೆಂದರ್ಜುನನು ಹಣೆ ಚಾಚಿದನು ಹರಿಪದಕೆ ॥ ೩೩

ಎನಲು ನಗುತೆತ್ತಿದನು ಸಾರಥಿ
ತನವ ಕೈಕೊಂಡನು ಕೃಪಾಳುವಿ
ನನುನಯವ ನಾವೆತ್ತ ಬಲ್ಲೆವು ಭೃತ್ಯವರ್ಗದಲಿ ।
ತನಗಹಂಕೃತಿಯಿಲ್ಲ ವೈರೋ
ಚನಿಯ ಪಡಿಹಾಱಿಕೆ ಕಿರೀಟಿಯ
ಮನೆಯ ಬಂಡಿಯ ಬೋವತನವೆಲೆ ನೃಪತಿ ಕೇಳೆಂದ ॥ ೩೪

## ೩. ಮುಗುಳೆಳುಪಿದರೆ ರಾಜ್ಯದ ಪದವಿಗನುಚಿತವಾಯ್ತು

ಎಲೆ ಪರೀಕ್ಷಿತತನಯ ಕೇಳು
ಮ್ಮಳಿಸಿದನು ಯಮಸೂನು ಮುರರಿಪು
ಫಲುಗುಣಗೆ ಮೈಗೊಡುವನೋ ಕೌರವನಿಗೊಳಗಹನೋ ।
ತಿಳಿಯಲರಿದೆನುತಿರಲು ಬಲಗ
ಣ್ಣಾಲುಗಿತಿದಿರಲಿ ಕೈಯ ಗುಡಿಯಲಿ
ಸುಳಿದನೊಬ್ಬನು ಬಹಳ ಮಾರ್ಗಶ್ರಮದ ಭಾರದಲಿ ॥ ೧

ಇದಿರುಗೊಳ್ಳೀಳರಸ ನಡೆ ಕಟ
ಕದಲಿ ಕಟ್ಟಿಸು ಗುಡಿಯನಹಿತರ
ಸದೆದೆ ಹೋಗಿನ್ನೇನು ಸರಿಯೇ ನಿನಗೆ ಸುರಗಿರರು ।
ಪದವನಱಿಸಿದಡಾಳಿಗೊಂಡನು
ಸದಮಲಶ್ರುತಿತತಿಯುನೆಂಬ
ಗ್ಗದ ಮಹಾ ಪರದೈವ ಬಿಜಯಂಗೈದನೇಳೆಂದ ॥ ೨

ಕಥೆಗೆ ನಿನ್ನೊಡಹುಟ್ಟಿದನ ಸಾ
ರಥಿತನವ ಕೈಕೊಂಡನಿನ್ನೀ
ಪೃಥಿವಿ ನಿನ್ನಯ ರಾಣಿವಾಸವು ಚಿಂತೆ ಬೇಡಿದಕೆ ।
ವ್ಯಥಿತವಾಯಿತು ವೈರಿಬಲ ಪ್ರ
ಪ್ರಥಿತಸಾಹಸನಾದೆ ನೀನೆನೆ
ಶಿಥಿಲಸಂಶಯನಂಗಚಿತ್ರವನಿತ್ತನಾತಂಗೆ ॥

ಉಕ್ಕಿ ವಿಸಟಂಬರಿವ ಹರುಷದ
ಕಿಕ್ಕೆಯಲಿ ಕೈಗೊಡುವ ನೃಪಜನ
ವಿಕ್ಕಲಿಸೆ ಹೊಱವಂಟನರಸನು ಸಕಲ ದಳಸಹಿತ ।
ಮಿಕ್ಕು ಬರೆ ಬರೆ ಕೃಷ್ಣನನು ಕಂ
ಡೊಕ್ಕನೊಡಲನು ಚರಣದಲಿ ಸಾ
ಕಕ್ಕುಜವಿದೇನೆನ್ನುತ ಹರಿ ನೆಗಹಿದನು ಧರ್ಮಜನ ॥ ೪

ಪರಕೆ ಪರತರವಸ್ತುವನು ಗೋ
ಚರಿಸಿದೆವಲ್ಲೈ ಮುನಿಜನಂಗಳ
ವರಸಮಾಧಿಗೆ ಸಮಯವಿಲ್ಲದ ದೇವನೆಮಗೊಲಿದೈ ।

ಕರುಣಿ ಬಿಜಯಂಗೈದೆಯೆನೆ ಮುರ
ಹರನು ನಗುತಿಂತೆಂದ ನಾವೀ
ನರನ ಸಾರಥಿಯಲ್ಲದೆಲ್ಲಿಯ ವಸ್ತು ಹೇಳೆಂದ ॥ ೫

ಬಯಲಿಗೆಮ್ಮನು ನಾಚಿಸದೆ ಪಾ
ಳೆಯಕೆ ನಡೆಯೆಂದಸುರರಿಪು ಸೇ
ನೆಯನು ಕೈವೀಸಿದನು ಬಂದನು ರಾಜಮಂದಿರಕೆ ।
ನಿಯತವಿತ್ತಲು ಕೇಳು ಜನಮೇ
ಜಯಮಹೀಪತಿ ಧರ್ಮಸುತನೋ
ಲೆಯ ಹದನನರಿದಂತೆ ಶಲ್ಯನೃಪಾಲ ಹೊರವಂಟ ॥ ೬

ಮೇಳವಿಸಿ ಹೊರವಂಟನಗಣಿತ
ದಾಳು ಕುದುರೆಯ ಕೂಡಿ ಬರುತಿರೆ
ಕೇಳಿದನು ಕುರುರಾಯನಾ ಮದ್ರಾಧಿಪನ ಬರವ ।
ಆಳೊಳಗ್ಗಳನದಟ ಶಲ್ಯನೃ
ಪಾಲಕನ ತಿರುಹಿದರೆ ಗೆಲುವುದು
ಕಾಳಗವು ತನಗೆಂದು ನಿಶ್ಚೈಸಿದನು ಮನದೊಳಗೆ ॥ ೭

ಎಂದಖಿಳವಸ್ತುಗಳ ಜೋಡಿಸಿ
ಬಂದು ಪಾಳೆಯ ಬಿಡುವ ತಾವಿನೊ
ಳಂದವಿಗೆ ಮಾಡಿಸಿದ ಗುಡಿ ಮಂಡವಿಗೆ ಚೌಕಿಗೆಯು ।
ಒಂದು ಯೋಜನದಗಲದಲಿ ಹಯ
ವೃಂದ ಗಜಶಾಲೆಗಳ ಪರುಠವ
ದಿಂದ ರಚಿಸಿದ ಕೂಳ ಬಾಣಸವಖಿಳ ಮೋಹರಕೆ ॥ ೮

ಬಂದು ಬಿಡುವನ್ನೆಬರ ಮುನ್ನಿನ
ಮಂದಿರವ ಹೊಗುವಂತೆ ಶಲ್ಯನ
ಮಂದಿ ಸಂತೋಷದ ಸಮುದ್ರದಿ ಮೂಡಿ ಮುಳುಗಾಡಿ ।
ಮುಂದೆ ನಡೆಯಲು ಮತ್ತೆ ಮುನ್ನಿನ
ಚಂದದಲಿ ಮನೆಮನೆಗಳನು ನಲ
ವಿಂದ ರಚಿಸಿದನ್ನೆದೆ ಕುರುಪತಿ ಪಯಣ ಪಯಣದಲಿ ॥ ೯

ಆರು ನಯದಲಿ ನಮ್ಮಖಿಳ ದಳ
ಭಾರವನು ಸಂತೈಸಿದವ ಕುರು
ವೀರನೋ ಯಮನಂದನನೊ ಹಿರಿದಾಗಿ ಮೆಚ್ಚಿದೆನು ।
ಆರು ಮಾಡಿಸಿದವರು ಬಂದರೆ
ಹಾರಲೇಕೆನ್ನೊಡಲ ತೆಱುವೆನು
ಧೀರ ವೈದೋಱಲಿಯೆನುತ ಹೊಯ್ಸಿದನು ಡಂಗುರವ ॥ ೧೦

ನಗುತ ಕೌರವರಾಯನವನೋ
ಲಗಕೆ ಬರಲಿದಿರೆದ್ದು ಮುದದಲಿ
ತೆಗೆದು ಬಿಗಿಯಪ್ಪಿದನು ಕುಶಲವನೈದೆ ವಿಸ್ತರಿಸಿ ।
ಮಗನೆ ನೀನೇ ರಚಿಸಿದಾತನು
ಬಗೆದಣಿಯೆ ಬೇಡುವುದು ತಾ ಹಂ
ಗಿಗನು ನಿನಗೆನೆ ಮಾವ ಬಿನ್ನಹ ಮರಳಿ ನೀವೆಂದ ॥ ೧೧

ಎನಗೆ ಬೆಂಬಲವಾಗಿ ಕುಂತೀ
ತನಯರನು ಬಿಡಿ ಮರಳಿ ನೀವ್ ಹ
ಸ್ತಿನಪುರಿಗೆ ನೀವಿತ್ತ ವರವೆನೆ ಶಲ್ಯ ಮನವಳುಕಿ ।
ತನುಜ ಕೈಕೊಂಡೆನು ಯುಧಿಷ್ಠಿರ
ಜನಪನಳಿಯನು ನೀನು ಲೋಗನೆ
ಎನಗೆ ನೀವಿತ್ತಂಡ ಸರಿ ನಿಮ್ಮತ್ತ ಬಹೆನೆಂದ ॥ ೧೨

ಆಗಲಿದೆನು ಹಲಕಾಲವೈವರ
ಮೊಗವನೀಕ್ಷಿಸಿ ಮರಳುವೆನು ಬಂ
ಧುಗಳ ದರುಶನ ಫಲವಲಾ ಸಂಸಾರತರುವಿಂಗೆ ।
ಮಗನೆ ಸೇನೆಯ ಕೊಂಡು ವಾರಣ
ನಗರಿಗೈದುವುದೆಂದು ಭೂಪನ
ಮಗುಳಿಚಿದನಾ ಶಲ್ಯ ಬಂದನು ಪಾಂಡವರ ಹೊರೆಗೆ ॥ ೧೩

ಇದಿರುಗೊಂಡರು ಕಾಣಿಕೆಯನಿ
ಕ್ಕಿದರು ತೆಗೆದಪ್ಪಿದರು ಹಲ ಕಾ
ಲದಲಿ ಹೂಳಿದ ಹರುಷವನು ಕೆಗಾಗುಮಾಡಿದರು ।

ಮುದದಿನೆಲ್ಲರ ಕುಶಲವನು ಕೇ
ಳಿದನು ದುರ್ಯೋಧನಗೆ ಸಿಲುಕಿದ
ಹದನನೆಲ್ಲವ ಹೇಳಿದನು ನಿರ್ವಿಣ್ಣಮನನಾಗಿ। ೧೪

ಆದಡೇನೆಲೆ ಕಂದ ತಪ್ಪದು
ಮೇದಿನಿಯು ಸಿರಿ ನಿಮಗೆ ಸತ್ಯವ
ಕಾದು ಹದಿಮೂಱಬುದ ನವೆದಿರಿ ಮುಂದೆ ಲೇಸಹುದು।
ಕಾದಿ ವೃತ್ರಾಸುರನ ಮುಱಿದಪ್ಪ
ವಾದದಲಿ ಸಿರಿ ಹೋಗಿ ದುಃಖಿತ
ನಾದನಿಂದ್ರನು ಮತ್ತೆ ಬದುಕಿದ ಶಚಿಯು ದೆಸೆಯಿಂದ॥ ೧೫

ಆದಡಾ ಕರ್ಣಂಗೆ ಸಾರಥಿ
ಯಾದಿರಾದಡೆ ಸಮರಮುಖದಲಿ
ವಾದತೇಜೋವಧೆಯ ಮಾಡುವುದವನನವಗಡಿಸಿ।
ಕಾದುಕೊಡುವುದು ನಾವು ಗೆಲುವವೊ
ಲಾದರಿಸುವುದು ನಮ್ಮನೆಂದಾ
ಮೇದಿನೀಪತಿ ಶಲ್ಯನನು ಕಳುಹಿದನು ಸತ್ಕರಿಸಿ॥ ೧೬

ಬೀಳುಕೊಂಡನು ಶಲ್ಯನಿತ್ತಲು
ಹೇಳುವರ ಮನ ಮುರಿಯೆ ನೋಟಕ
ರಾಲಿ ಝೊಮ್ಮಿಡೆ ಕಾದುವರ ಮನ ಮೂಱು ಕವಲಾಗೆ।
ಜ್ಞಾಳಿಗೆಯು ಹೊಗರಲಗಿನುರಿಯ ಥ
ಡಾಳಿ ನಭದಲಿ ಝುಗಝುಗಿಸೆ ಹೇ
ರಾಳದಾಳ್ಕುದುರೆಯಲಿ ಬರುತಿರ್ದನು ನೃಪಸ್ತೋಮ॥ ೧೭

ದ್ರುಪದರಾಜಪುರೋಹಿತನು ಕುರು
ನೃಪನನಿತ್ತಲು ಬಂದು ಕಂಡನು
ವಿಪುಳಮತಿ ಮಾತಾಡಿದನು ನಿಜ ರಾಜಕಾರಿಯವ।
ಕೃಪಣತನದಲಿ ಕೌರವನು ಗುರು
ಕೃಪರ ಭೀಷ್ಮರ ಮಾತನೊಲ್ಲದೆ
ಚಪಲ ಕರ್ಣನ ಕೂಡೆ ನಿಶ್ಚೈಸಿದನು ಕಾಳಗವ॥ ೧೮

ಹರುಷದಲಿ ಸಂಜಯನನಾಗಳೆ
ಕರೆದು ಕುರುಪತಿ ಬುದ್ಧಿಗಲಿಸಿದ
ನರಿನೃಪನ ಪಾಳೆಯಕೆ ಹೋಹುದು ನುಡಿವುದವಗಡಿಸಿ।
ಧರೆಯ ಬೇಡಿಸಿ ಕಳುಹಿದಿರಿ ಸಂ
ಗರದೊಳಸಿಧಾರೆಯಲಿ ಕೊಡುವೆವು
ಬಱಿದೆ ಕೊಟ್ಟಡಧರ್ಮವೆಂಬುದು ಧರ್ಮತನಯಂಗೆ ॥ ೧೯

ಬೀಳುಕೊಂಡನು ಮಂತ್ರಿ ಪಯಣದ
ಮೇಲೆ ಪಯಣದಲೈದಿ ಪಾಂಡುನೃ
ಪಾಲಕರ ಪಾಳೆಯಕೆ ಬಂದನು ರಾಯಗಱುಹಿದನು।
ಕೇಳಿ ಬೀಡಾರವನು ಬೀಯುವ
ಹೇಳಿಸಿದನಾ ಮಱುದಿವಸ ಒ
ಡ್ಡೋಲಗವ ರಚಿಸಿದನು ಕುಂತೀಸೂನು ಠೀವಿಯಲಿ ॥ ೨೦

ಹರಿ ವಿರಾಟ ದ್ರುಪದ ಕೈಕಯ
ರಿರಲು ಬಲವಂಕದಲಿ ವಾಮದ
ಲಿರೆ ವೃಕೋದರ ಫಲಗುಣಾದಿಗಳಖಿಳಮಂತ್ರಿಗಳು।
ತರುಣಿಯರು ಪರಿಮಳದ ಜಂಗಮ
ಭರಣಿಯರು ಮನ್ಮಥ ವಿರಂಚಿನ
ತರುಣಿಯರು ಕುಳ್ಳಿರ್ದರರಸನ ಹಿಂದೆ ಸಂದಣಿಸಿ ॥ ೨೧

ಸಾಲಮುಕುಟದ ರತ್ನರಶ್ಮಿಯ
ದಾಳಿ ಗೆಲಿದುದು ತಮವನಿನ್ನೀ
ಮೇಲು ತೆಕ್ಕೆಯ ತರಣಿತೇಜದ ಪ್ರಭೆಯ ಹಂಗೇಕೆ।
ಮೇಲೆ ಕೈದೀವಿಗೆಗಳಧಿಕ
ಜ್ವಾಲೆಯದು ಪುನರುಕ್ತವೆನೆ ಭೂ
ಪಾಲನೋಲಗವೆಸೆದುದಿಂದ್ರನ ಸಭೆಗೆ ವೆಗ್ಗಳಿಸಿ ॥ ೨೨

ಕಳಕಳವೆ ಘಡ ಮಾಣು ಮಾಣೆ
ದುಲಿಯೆ ಕಂಚುಕಿನಿಕರ ವಂಗೈ
ಸಳದ ಬಾಗಿಲಿ ಗಾಯರಿದರು ಮಣಿದ ಮಕುಟದಲಿ।

ನಳಿನನಾಭನು ನಗುತ ಪರಮಂ
ಡಲದ ಶಿಷ್ಟನು ಬರಲಿಯೆನೆ ಬಾ
ಗಿಲಲಿ ಕೈದುವ ಕೊಂಡು ಹೊಗಿಸಿದರಂದು ಸಂಜಯನ ‖ ೨೩

ಬಂದು ಕಾಣಿಕೆಗೊಟ್ಟು ಹರುಷದ
ಲಂದು ವ್ಯೆಯಿಕ್ಕಿದನು ಭಯದಲಿ
ನಿಂದು ನೋಡಿದನೆಡಬಲದ ಮಂಡಳಿಕ ಮನ್ನೆಯರ ।
ಸಂದ ಯಮನೋ ನಿರುತಿಯೋ ಪೌ
ರಂದರನೊ ಪಾವಕನೊ ವರುಣನೊ
ಮಂದಿಯಿದು ತಾ ಮರ್ತ್ಯರೇ ಹಾ ಎನುತ ಬೆಱಗಾದ ‖ ೨೪

...ವದಲಿ ಹನ್ನೆರಡು ವರುಷವು
ತೊಳಲಿದರು ಸಿರಿ ಹೋಗಿ ನಿಮಿಷಕೆ
ನೆಲನ ರಾಯರು ನೆರೆದು ಜೀಯೆನುತಿದೆ ಮಹಾದೇವ ।
ನಳಿನನಾಭನ ಕರುಣದಳತೆಗೆ
ನಿಲುಕದಿಹುದೇನುಂಟು ಮುರರಿಪು
ಮುಳಿದಡಾವನ ಮುಱಿಯನೆಂದನು ತನ್ನ ಮನದೊಳಗೆ ‖ ೨೫

ಇಳುಹಿದನು ಹೊರೆಯಲಿ ಮಹೀಪತಿ
ಕಳುಹಿದುಡುಗೊಱೆಗಳನು ಭೂಪತಿ
ತಿಲಕ ಧರ್ಮ್ಮಜನೊಪ್ಪುಗೊಂಡನು ನೃಪನ ಪಾವುಡವ ।
ಒಲವು ಬೊಪ್ಪನಲುಂಟಲಾ ಮ
ಕ್ಕಳನು ಮಱೆಯನು ಲೇಸು ಸಂಜಯ
ತಿಳುಹು ತಾತನ ಕುಶಲವನು ಗಾಂಧಾರಿದೇವಿಯರ ‖ ೨೬

ಗುರು ಪಿತಾಮಹ ಗೌತಮರ ಸ
ಚ್ಚರಣ ಕಮಲಂಗಳಿಗೆ ಕುಶಲವೆ
ಗುರುಸುತನು ಸುಕ್ಷೇಮಿಯೇ ಕುರುರಾಯನಿರವೆಂತು ।
ಕುರುಪತಿಯು ಸೋದರರು ಮಕ್ಕಳು
ಸರಸಿಜಾನನೆ ಭಾನುಮತಿ ಮಿ
ಕ್ಕರಿಸಿಯರು ಕರ್ಣಾದಿಗಳು ನಿರ್ವೃತರೆ ಹೇಳೆಂದ ‖ ೨೭

ಸುಖಿಗಳನಿಬರು ಜೀಯ ನಿಮ್ಮಯ
ನಿಖಿಳ ಬಾಂಧವರನು ಸಹೋದರ
ಸಖ ಸುತಾದಿಗಳನು ಪುರೋಹಿತ ಪೌರ ಪರಿಜನವ।
ಮುಖಸಮುದ್ಭವೆ ಮೊದಲು ಪಂಕಜ
ಮುಖಿಯರನು ಬೆಸಗೊಂಡು ಕಳುಹಿದ
ರಖಿಳ ಕುರುನಂದನರು ಭೀಷ್ಮ ದ್ರೋಣ ಗೌತಮರು ॥ ೨೮

ಮುನ್ನ ಭೀಷ್ಮ ದ್ರೋಣ ಗೌತಮ
ರುನ್ನತದ ಕಾರುಣ್ಯದಲಿ ಸಂ
ಪನ್ನ ಸಾಹಸರಾದೆವಾಚರಿಸಿದೆವು ಧರ್ಮವನು।
ಇನ್ನು ಧೃತರಾಷ್ಟ್ರಾವನೀಶನು
ತನ್ನ ಮಕ್ಕಳ ಬಾಂಧವ ಪ್ರತಿ
ಪನ್ನತೆಯ ನೆಜಿ ಕಾಂಬನೆಂದನು ಧರ್ಮಸುತ ನಗುತ ॥ ೨೯

ಏನು ಬಂದಿಹ ಹದನು ಕೌರವ
ನೇನನೆಂದನು ಅವನಿಪಾಲಕ
ನೇನನೆಕ್ಕಟಿಗರೆದು ಬುದ್ಧಿಯ ಕಲಿಸಿ ಕಳುಹಿದನು।
ಏನುವನಃ ನೀನುಳುಹದಿರು ವಿನ
ಯಾನುಗತವಾಗಿರಲಿ ಮೋಕ್ಷ್ ಶೌ
ರ್ಯಾನುಗತವಾಗಿರಲಿ ಬಿನ್ನವಿಸೆಂದನಸುರಾರಿ ॥ ೩೦

ನಾಡ ಬಯಸುವರೆಮ್ಮೊಡನೆ ಹೊಯಿ
ದಾಡುವುದು ಸಂಪ್ರತಿಗೆ ಚಿತ್ತವ ಸಂಧಿ
ಮಾಡಲಾಗದು ಸಂಧಿ ವೀರ ಕ್ಷತ್ರಿಯರ ಮತವೆ।
ಬೇಡುವರೆ ಪಾರ್ಥಿವರು ನಾವದ
ನಾಡಬಾರದು ತಮ್ಮ ಜನನವ
ನೋಡಿ ನುಡಿಯರು ಪಾಂಡುಸುತರಲ್ಲೆಂದು ಹೇಳೆಂದ ॥ ೩೧

ನೊದಲೊಳವಮಳಿ ಬ್ರಹ್ಮಚರ್ಯವು
ಮದುವೆಯಾಯಿತು ಬಳಿಕ ವನವಾ
ಸದಲಿ ವಾನಪ್ರಸ್ಥವೆಂಬಾಶ್ರಮವನಳವಡಿಸಿ।

ತುದಿಗೆ ತಾ ಸಂನ್ಯಾಸವನು ಮಾ
ಡಿದನು **ಮಗುಳೆಳುಪಿದರೆ ರಾಜ್ಯದ**
**ಪದವಿಗನುಚಿತವಾಯ್ತು** ಯಮಜಂಗೆಂದು ಹೇಳೆಂದ ॥೩೨

ತಳಿತ ಜೌವನದುಬ್ಬುಗಳ ಕಳ
ವಳಿಗರರ್ಜುನಭೀಮರೆಂಬುವ
ರೊಳಗೆ ವೈರವ ಬಿತ್ತಿ ಬೆಳಸುವ ಕೃಷ್ಣ ಹಗೆ ತಮಗೆ।
ಉಳಿದ ದ್ರುಪದ ವಿರಾಟರೆಂಬೀ
ಹುಳುಗಳೊಲಿದಂತೋರೆಗೆಡೆವರು
ತಿಳಿಯೆ ತಾನೇ ಕಡೆಗೆ ಕೆಡದಿರನೆಂದು ಹೇಳೆಂದ ॥ ೩೩

ಸಾಕು ಕೌರವನಾಯು ಮಾತನ
ದೇಕೆ ಚಿತ್ತೈಸುವಿರಿ ದೂತನ
ನೂಕು ನೂಕು ಕುಠಾರ ದುರ್ಯೋಧನನನೊಡೆಹೊಯ್ಯು।
ಶಾಕಿನಿಯರಿಂಗೆ ರಕುತವಾರಿಯೊ
ಳೋಕಳಿಯನಾಡಿಸುವೆ ನಿಲು ತಡ
ವೇಕೆನುತ ಘುಡುಘುಡಿಸಿ ಕಿಡಿ ಕಿಡಿಯೋದನಾ ಭೀಮ॥ ೩೪

ಬೆಸಸುವುದು ಹಿಂದಾದ ಜೂಜಿನೊ
ಳೆಸೆದ ಜಾಡ್ಯವೆ ಸಾಕು ಧರ್ಮದ
ದೆಸೆಗೆ ನೀವಿನ್ನುತ್ತರಾಯಿ ಸುಯೋಧನನ ಕಡಿದು।
ದೆಸೆದೆಸೆಯ ದೈವಂಗಳಿಗೆ ಹಸ
ರಿಸುವೆವೆಮ್ಮನು ಕಳುಹೆನುತ ಗ
ರ್ಜಿಸಿದರಂದಭಿಮನ್ಯು ಸಾತ್ಯಕಿ ಭೀಮನಂದನರು ॥ ೩೫

ಕದಡಿತಾ ಆಸ್ಥಾನ ಕಲ್ಪಾಂ
ತದ ಮಹಾಸಿಡಿಲಂತೆ ವೀರರು
ಕೆದರಿ ತಮತಮಗೆದ್ದು ನುಡಿದರು ಕಂಡೆಯುವ ಜಡಿದು।
ಉದುರ ಹೊಯ್ವೆವು ಹಲ್ಲುಗಳ ಕಿ
ಬ್ಬದಿಯಲುಗಿವೆವು ಕರುಳನಹಿತರ
ತಿದಿಯ ಸುಲಿವೆವು ಬೆಸಸು ನೇಮವನೆಂದರತಿಬಲರು ॥ ೩೬

ಈತನಿಂದೇನಹುದು ಲೇಸುಗ
ಳಾತನಿಂದವೆ ಬರಲಿ ಹೊಲ್ಲಹ
ವಾತನಿಂದವೆ ಬರಲಿ ಹಿಂದಣ ಕಾನನಾಲಯದ ।
ಯಾತನೆಯ ಸ್ಮರಿಸಿದ ತಮಗಿಂ
ದಾತ ನುಡಿದಡೆ ಹಾನಿಯೇ ನಿಲಿ
ಕಾತರಿಸದಿರಿಯೆಂದು ಸಂತೈಸಿದನು ಯಮಸೂನು ॥ ೩೭

ಕಳುಹಿದನು ಬೀಡಾರಕವನಿಪ
ತಿಲಕನಾ ಸಂಜಯನನಲ್ಲಿಂ
ಬಳಿಕ ಮಱುದಿನ ಕೃಷ್ಣಪಾರ್ಥರು ಕರಸಿ ಸಂಜಯನ ।
ಬಲುಹು ಮೆಲುಹಿನ ನುಡಿಗಳಿಂದವೆ
ತಿಳುಹಿದರು ಮಱುದಿವಸದೋಲಗ
ದೊಳಗೆ ದೂತನ ಕರಸಿ ಬೀಳ್ಕೊಟ್ಟನು ಯುಧಿಷ್ಠಿರನು ॥ ೩೮

ಹೊನ್ನಿನಲಿ ಮಧುರೋಕ್ತಿಯಲಿ ವಿವಿ
ಧಾನ್ನವುಡುಗೊಱೆಗಳಲಿ ಶಿಷ್ಟನ
ಮನ್ನಿಸಿದನವನೀಶನುಚಿತದಲವನ ಬೀಳ್ಕೊಟ್ಟ ।
ಪನ್ನಗನ ಸಿರಿಮಂಚದಾತನು
ಬೆನ್ನಲಿರುತಿರೆ ಪಾಂಡುಪುತ್ರರಿ
ಗಿನ್ನು ಮಂಗಳವೆನುತ ಸಂಜಯ ಬಂದನಿಭಪುರಿಗೆ ॥ ೩೯

## ೪. ತೊಡೆಗಳಿಗೆ ಸುಕ್ಷೇಮವೇ

ಬಂದು ಮೈಯಿಕ್ಕಿದನು, ಕುರುನೃಪ
ವೃಂದವನು ಪರಿವಾರವನು ಯಮ
ನಂದನನು ಬೆಸಗೊಂಡು ಕಳುಹಿದನುಚಿತವಚನದಲಿ।
ಎಂದು ಬಳಿಕಿನ ರಾಜಕಾರ್ಯವ
ನಂದು ಬಿನ್ನೈಸಿದನು ಚಿತ್ತೈ
ಸೆಂದು ಧೃತರಾಷ್ಟ್ರಂಗೆ ದುರ್ಯೋಧನಗೆ ಕೈಮುಗಿದು ॥ ೧

ಜೀಯ ಬಿನ್ನಹವಿಂದು ಪಾಂಡವ
ರಾಯನೈಶ್ವರ್ಯವನು ಸಾವಿರ
ಬಾಯ ಶೇಷನು ಹೊಗಳಲಳವಲ್ಲೆನ್ನ ಪಾಡೇನು।
ನಾಯಕರ ಕಡುಹುಗಳನವರವ
ರಾಯತವನನಿಬರಿಗೆ ಕಮಲದ
ಳಾಯತಾಕ್ಷನ ಕರುಣದಳತೆ ವಿಚಿತ್ರವಾಯ್ತೆಂದ ॥ ೨

ಓಲಗದೊಳುಬ್ಬಿದ್ದ ನುಡಿಯಲಿ
ಹೂಳಿ ತಮತಮಗೆನ್ನ ಜಱಿದರು
ಕಾಳಗಕೆ ಕೈಗಟ್ಟಿ ಹಿಂಡೆದ್ದೊದಱಿತವನಿಪರು।
ಮೇಲೆ ಸಂತೈಸಿದನು ಧರ್ಮನೃ
ಪಾಲನಲ್ಲಿಂ ಬಳಿಕ ಮುರಹರ
ನಾಲಯಕೆ ಪರಿಮಿತದಲರ್ಜುನನೆನ್ನ ಕರಸಿದನು ॥ ೩

ದೇವನಿದ್ದನು ಸತ್ಯಭಾಮಾ
ದೇವಿಯರ ನಸುಮಲಗಿಯರ್ಜುನ
ದೇವನಂಕದ ಮೇಲೆ ಸಿರಿಪದಕಮಲವನು ನೀಡಿ।
ನಾವು ಬರಲೆಮಗುಚಿತದಲಿ ಸಂ
ಭಾವನೆಯ ಮಾಡಿಸಿದನೆಮಗಿ
ನ್ನಾವುದನು ನೇಮಿಸಿದಿರೆನಲಿಂತೆಂದನಸುರಾರಿ ॥ ೪

ಎಮಗೆ ಸರಿಯಿತ್ತಂಡದಲ್ಲಿಯು
ಮಮತೆ ಬೇಱೊಬ್ಬರಲಿ ಪಕ್ಷ
ಭ್ರಮೆಯ ಮಾಡೆವು ಹಿತವ ಬಯಸುವೆವೆರಡು ಸಂತತಿಗೆ।

ಕಮಲಮುಖಿ ಸುಲಿಪಡೆದು ಲಕ್ಷ್ಮೀ
ರಮಣ ಲಕ್ಷ್ಮೀರಮಣ ಲಕ್ಷ್ಮೀ
ರಮಣ ಎಂದೊಱಲಿದಡೆ ಸಂಜಯ ನೊಂದೆ ನಾನೆಂದ ॥ ೫

ಕಾವುದೈ ಗೋವಿಂದ ಸಲಹೈ
ದೇವಕೀಸುತ ಗಂಡರೈವರ
ಭಾವ ಬೆಟ್ಟಿತು ನೀನಲ್ಲೈ ದೇಸಿಗರಿಂಗಧಿದೈವ ।
ದೇವ ಕೆಟ್ಟೆನು ಕೆಟ್ಟೆನೈ ಕರು
ಣಾವಲೋಕನದಿಂದ ಸಲಹೈ
ಜೀವನವನೆಂದೊರಲೆ ಸಂಜಯ ನೊಂದೆ ನಾನೆಂದ ॥ ೬

ಬಂಟರಾವ್ ಭಕ್ತರಿಗೆ ನೆನೆವರು
ನೆಂಟರೆಮಗೊಲಿದಂತೆ ಹೊಗಳಿದ
ಡೆಂಟುಮಡಿ ಮೆಚ್ಚುವೆವು ಮೆಚ್ಚೆವು ತರ್ಕಸಾಧಕರ ।
ಉಂಟು ಪಾಂಡವರೈವರೊಳು ಬಲು
ನಂಟುತನ ಮಱೆಯೇತಕಿವರಿಗೆ
ಕಂಟಕರು ನಮಗಾದ ಕಂಟಕರೆಂದನಸುರಾರಿ ॥ ೭

ನೆನೆವುದೆಂದನು ಪಾರ್ಥನಾ ಕಾ
ನನದೊಳಗೆ ಗಂಧರ್ವರಲಿ ಬಂ
ಧನವನೀ ಗೋಗ್ರಹಣದಲಿ ಮಾಡಿದ ಪಲಾಯನವ ।
ವನಜಮುಖಿಯನು ಬಯಸಿದಡೆ ಬಿ
ಲ್ಲಿನಲಿ ಬಡಿವಡೆದುದನು ಕೌರವ
ಜನಪ ಮಱೆದಿರಲಾಗದೆಂದರಸಂಗೆ ಹೇಳೆಂದ ॥ ೮

ವೀರಭೀಮನ ಗದೆಯ ಹೊಯ್ಲಿನ
ಭಾರಣೆಯನೆನ್ನ ತುಳಚಾಪದ
ಸಾರಶಸ್ತ್ರಾವಳಿಯ ಮಳೆಗಾಲದ ಮಹಾದ್ಭುತವ ।
ಧೀರ ನಕುಲನ ಸಾತ್ಯಕಿಯ ಬಲು
ಕೂರಸಿಯ ಸಹದೇವಮತ್ಸ್ಯರು
ದಾರತೆಯ ನಿಮ್ಮರಸನಱಿದಿಹುದೆಂದನಾ ಪಾರ್ಥ ॥ ೯

ಅಂದು ಜೂಜಿನ ಸಭೆಯೊಳಗೆ ನಾ
ವೆಂದ ಮಾತುಗಳುಂಟು ತಾವದ
ಮುಂದೆ ನೋಡಲಿ ಕರ್ಣ ಶಕುನಿ ಸುಯೋಧನಾದಿಗಳು ।
ಇಂದು ನೆನೆವುದು ದೇಶ ಕಾಲವ
ಹಿಂದುಗಳೆಯದೆ ಬೇಗ ಮಾಡುವೆ
ವೆಂದು ಬಿನ್ನಹ ಮಾಡಹೇಳಿದನರ್ಜುನನು ನಿಮಗೆ ॥ ೧೦

ತೊಡೆಗಳಿಗೆ ಸುಕ್ಷೇಮವೇ ನಿ
ನ್ನೊಡೆಯನವನೊಡ್ಡವುಟ್ಟಿದನ ವೈ
ಜಡಿದುದೇ ಪಾಲಿಸಿದಡನಿಬರಿಗಹುದು ರುಧಿರಜಲ
ಒಡನೆ ಹುಟ್ಟಿದ ನೂಱುವರು ವೈ
ಗೆಡರಲ್ಲೇ ಬೆಸಗೊಂಬುದಂಜದೆ
ಯೊಡೆಯರಿಗೆ ಹೊಣೆಗೊಂಡೆ ಹೇಳೆಂದಟ್ಟಿದನು ಭೀಮ ॥ ೧೧

ಸಾಕು ಸಂಜಯ ಗಳಹದಿರು ಫಡ
ನೂಕಿವನನಾರಲ್ಲಿಗಟ್ಟಿದ
ರಾಕುತಾರರ ಬಯಲ ಗೃಹ ಗರ್ಜನಯ ಗರ ಹೊಡೆದು ।
ತ್ರೇಕಿ ತಲೆಕೆಳಗಾದನಿವನವಿ
ವೇಕಸಾಗರನೆಲೆ ನೃಪತಿ ಜಗ
ದೇಕವೀರನು ಕರ್ಣ ತಾನಿರೆ ಸಂಧಿಯೇಕೆಂದ ॥ ೧೨

ಮಂದೆಯಲಿ ವೈಮಱೆದು ಬಾಹಿರ
ರೆಂದ ಮಾತನು ರಾಜಸಭೆಯಲಿ
ತಂದು ಹರಹುವನಿವನು ಶಿಷ್ಟನೆ ಜಗದ ಭಂಡನಲಾ ।
ಇಂದುಮೌಳಿಯನೊಂದು ಬಾರಿಗೆ
ಹಿಂದುಮುಂದನು ಮಾಡುವೆನು ತಾ
ಮುಂದಿ ಕುಂತೀಮಕ್ಕಳಿದಿರೇ ಎಂದನಾ ಕರ್ಣ ॥ ೧೩

ಭಂಡನೇ ಸಂಜಯನು ಲೋಕದ
ಭಂಡ ನೀನೆಲೆ ಕರ್ಣ ನಿನಗಾ
ಪಾಂಡವರ ಪರಿಯಂತವೇ ನಿನಗವರ ಸೇನೆಯಲಿ ।

ಗಂಡನೊಬ್ಬನೆ ಸಾಕು ಕೆದಱುವೆ
ಗಂಡಗರ್ವದ ಮಾತ, ನಿನ್ನನು
ದಿಂಡುದಱಿವನು ಮುನಿದಡರ್ಜುನನೆಂದನಾ ಭೀಷ್ಮ ॥ ೧೪

ಖುಲ್ಲನಿವನೀ ಕರ್ಣನಿವ ದಿಟ
ಬಲ್ಲಿದನು ಬವರದಲಿಯೆಂದಿವ
ನಲ್ಲಿ ನಂಬುಗೆಯುಂಟೆ ಮರುಳೇ ಹೇಳಿ ಫಲವೇನು ।
ಇಲ್ಲ ನೋಡರ್ಜುನಗೆ ಪಡಿ ನರ
ರಲ್ಲಿ ನಿರ್ಜರರಲ್ಲಿ ಪನ್ನಗ
ರಲ್ಲಿ ಕೈವಾರಿಗಳೆ ನಾವಿನ್ನೆಂದನಾ ಭೀಷ್ಮ ॥ ೧೫

ಮುಱಿಯದಿರು ಗಾಂಗೇಯನೆಂದುದು
ಪರಮತತ್ವವು ಪಾರ್ಥನನು ಸಂ
ಗರದಲಾನುವರಿಲ್ಲ ಕೇಳಮರಾಸುರಾಳಿಯಲಿ ।
ದುರುಳನಾಡುವ ಹೊಳ್ಳು ನುಡಿಗಳು
ಹಿರಿಯರಭಿಮತವಲ್ಲ ಸಂಧಿಗೆ
ಕೊರಳುಗೊಳಿಸುವುದುಚಿತವೆಂದನು ದ್ರೋಣನರಸಂಗೆ ॥ ೧೬

ಹುರುಳುಗೆಡಿಸುವಿರಾವು ನುಡಿದಡೆ,
ಕರಗಿ ಕುಂತಿಯ ಮಕ್ಕಳೆಂದಡೆ
ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವರಲ್ಲಿ ।
ಭರತ ಸಂತತಿಗಳಲಿ ಕೆಲಬರು
ನರರೆ ಕೆಲಬರು ಸುರರೆ ಸಾಕಂ
ತಿರಲಿ ಸಮರದೊಳೆಮ್ಮ ನೋಡೆಂದನು ಸುಯೋಧನನು ॥ ೧೭

ಬೇಡ ಮಗನೇ ಕೃಷ್ಣರಾಯನು
ರೂಢಿಸಿದ ಕಟ್ಟಾಳು, ಕೆಲಕೆಲ
ರಾಡುವರು ಸಾಕ್ಷಾತು ಲಕ್ಷ್ಮೀಕಾಂತ ಹರಿಯೆಂದು ।
ಕೂಡಿಕೊಂಡಿಹ ಸನಾತನವರನು
ಕೇಡನೊಂದನು ಮಾಡಲೀಯನು
ನಾಡನೊಪ್ಪಿಸು ಮಗನೆಯೆಂದನು ಬೆದಱಿ ಧೃತರಾಷ್ಟ್ರ ॥ ೧೮

ಮರುಳುಗಳಲಾ ಬೊಪ್ಪನವರೀ
ಮುರಹರನ ಹರಿಯೆಂದು ಮುನ್ನವೆ
ಯಱೆದಿಹೆನು ನೀವಂಜದಿರಿ ನಿಮಗಾಗದವಸಾನ ।
ಗುರು ನದೀಸುತ ಮುಖ್ಯರಿರಲೀ
ಕುರುಕುಲಕೆ ಕೇಡಹುದೆ ಕೊಲುವಡೆ
ಸುರಪತಿಯ ಸುತನಳವೆ ಎಂದನು ಕೌರವರ ರಾಯ ॥ ೧೯

ಭಾರ ಹೆಚ್ಚಿದಡೊಱಲಿ ಧರಣೀ
ನಾರಿ ಬಿನ್ನಹ ಮಾಡಿದಡೆ ದೈ
ತ್ಯಾರಿ ಬಿಜಯಂಗೈದನಿಲ್ಲಿಗೆ ಮನುಜವೇಷದಲಿ ।
ಭೂರಿದನುಜರನೊರಸಿದನು ಕೈ
ಯಾರೆ ಬಳಿಕರ್ಜುನನ ಶರದಲಿ
ಕೌರವರ ಕೊಲಿಸುವನು ನಾವಿನ್ನಂಜಲೇಕೆಂದ ॥ ೨೦

ಕಾವನಾತನೆ ಕೊಲುವನಾತನೆ
ಸಾವೆನಾತನ ಕೈಯ ಬಾಯಲಿ
ನೀವು ಪಾಂಡವರೊಡನೆ ಸುಖದಲಿ ರಾಜ್ಯಮಾಡುವುದು ।
ಸಾವವರು ನಾವಂಜಿ ಬದುಕೆವು
ನೀವು ಚಿಂತಿಸಬೇಡಿ ನಿಮ್ಮನು
ಕಾವನೈ ಕರುಣದಲಿ ಗದುಗಿನ ವೀರನಾರಯಣ ॥ ೨೧

## ೫. ಕಾಳಗವನೇ ಬಲಿದು ಬಹೆನು

ಕೇಳು ಜನಮೇಜಯಧರಿತ್ರೀ
ಪಾಲ ಧರ್ಮಜನಹಿತಮಂತ್ರಿಯು
ಬೀಳುಗೊಟ್ಟನು ಬಂದನಸುರಾರಾತಿಯೋಲಗಕೆ ।
ಮೇಲಣನುವಿನ್ನೇನು ಲಕ್ಷ್ಮೀ
ಲೋಲ ಕರುಣಿಸು ಕೌರವಕ್ಷಿತಿ
ಪಾಲನಲಿ ನಮಗೇನು ಘಟಿಸುವುದೆಂದು ನೃಪ ನುಡಿದ ॥ ೧

ಏನು ನಿನ್ನಭಿಮತವು ವರಸಂ
ಧಾನವೋ ಸಂಗ್ರಾಮವೋ ನಯ
ವೇನು ಮನದೋವರಿಯೊಳಿರಿಸದೆ ಹೇಳು ನಿಶ್ಚಯವ ।
ನೀನೊಲಿದ ಹದನಾವುದದನೊಲಿ
ದಾನು ಘಟಿಸುವೆನೆಂದು ಕುಂತೀ
ಸೂನುವನು ಬೆಸಗೊಂಡನಸುರಾರಾತಿ ನಸುನಗುತ ॥ ೨

✓ ಅಳಿವುವೊಡಲುಗಳವನಿಸಾಗರ
ವಳಿಯಲುಳಿವುದು ಕೀರ್ತಿ ಸೋದರ
ರೊಳಗೆ ನೆಱೆ ಕಡಿದಾಡಿ ಬದುಕಿದರೆಂಬ ದುರ್ಯಶದ ।
ಹಳಿವು ಹೊಱುವುದು ದೇವ ಸುಡಲೀ
ನೆಲನನಾ ಕೌರವನ ಕೈಯೊಳು
ಕೆಲವು ನಗರಂಗಳನು ಕೊಡಿಸಿಯೆ ಸಂತವಿಡಿ ಎಂದ ॥ ೩

ಅರಸನಭಿಮತವಿಂದು ಸಂಧಿಗೆ
ತೆರಳಿತಲೆ ಪವಮಾನಸುತ ನಿ
ನ್ನಱಿತವಾವುದು ಮನವ ವಂಚಿಸಬೇಡ ಹೇಳೆನಲು ।
ಧರಣಿಪತಿ ತಪ್ಪುವನೆ ಕರ್ಕಶ
ತರದ ಕದನದಲೇನು ಫಲ ಸೋ
ದರರ ವಧೆಗೊಡಬಡುವನಲ್ಲಸುರಾರಿ ಕೇಳೆಂದ ॥ ೪

ಹಗೆಯೊಳೆಮ್ಮವರಲ್ಲಿಯೆದೆಗಿ
ಗಿಚ್ಚುಗಳ ಖುಲ್ಲ ಕುಠಾರರಪನಂ
ಬುಗೆಯ ಬಳಸಿದರದು ಪುರಾಕೃತ ಕರ್ಮದವಶೇಷ ।

ಬಗೆಯೆನಪಮಾನವನು ಕೌರವ
ರಗಡುಮಾಡಿದರೆಂಬ ಚಿತ್ತದ
ದುಗುಡವೆಮಗಿನ್ನಿಲ್ಲ ಸಂಧಿಯ ರಚಿಸಿ ನೀವೆಂದ ॥ ೫

ಎಲೆ ಮಹಾದೇವಾಯ್ತು ಹಾಲಾ
ಹಲ ಸುಧಾರಸವುಕ್ಕಿದುರಿಯು
ಗ್ಗಳದ ಶೀತಲವಾಯ್ತು ಸಿಡಿಲಾಟೋಪ ನಯವಾಯ್ತು ।
ಕೊಳುಗುಳಕೆ ಪವಮಾನನಂದನ
ನಳುಕಿದನು ಮರ್ಝು ಮಾಯೆ ಕುಂತೀ
ಲಲನೆ ಪಡೆದಳೊ ಮಗನನೆಂದನು ದಾನವಧ್ವಂಸಿ ॥ ೬

ಈತನಭಿಮತವಿದು ಜಗದ್ವಿ
ಖ್ಯಾತ ಸಾಹಸ ಪಾರ್ಥ ಹೇಳ್ಳೆ
ನೂತನಾಳಾಪವನು ಕೇಳ್ವೆವು ಶ್ರುತಿರಸಾಯನವ ।
ಭೀತಿ ಬೇಡೆಂದೆನಲು ನಮಗಿ
ನ್ನೇತರಭಿಮತವೇನ ಹೇಳಿದ
ಡಾತುಕೊಂಬೆನು ಸಿರದೊಳೆಂದನು ಪಾರ್ಥ ಕೈಮುಗಿದು ॥ ೭

ನಕುಲ ಹೇಳ್ಳೆ ಹದನ ನಿನ್ನಯ
ಯುಕುತಿ ಸಾಮವೊ ಮೇಣು ಸಮರವೊ
ಸುಕರಮಂತ್ರವನರುಹು ನೀನೆಮಗಂಜಬೇಡೆನಲು ।
ಯುಕುತಿ ನಮಗಿನ್ನೇನುಭಯ ರಾ
ಜಕವ ಸಂತೈಸುವುದು ಬೇಱಿಮ
ಗುಕುತಿಯೆಲ್ಲಿಯದೆಂದನಾ ಮಾದ್ರೇಯ ವಿನಯದಲಿ ॥ ೮

ಆವುದಭಿಮತವೇನು ಹದ ಸಹ
ದೇವ ನೀ ಹೇಳೆನಲು, ಕೇಳೆಲೆ
ದೇವ ಸೇರದು ಸಂಧಿ, ಸಂಗರವೆನಗೆ ಸಮ್ಮತವು ।
ಆವ ವಿಧದಲಿ ಸಮರವನೆ ಸಂ
ಭಾವಿಸುವುದೆನೆ ನಗುತ ವರ ರಾ
ಜೀವಲೋಚನನಟ್ಟಿದನು ದ್ರೌಪದಿಗೆ ಚರರುಗಳ ॥ ೯

ದೇವಿ ಚಿತ್ತೈಸುವುದು ವರವಸು
ದೇವ ನಂದನನಟ್ಟಿದನು ಸಂ
ಭಾವಿಸುವುದರಿರಾಯುರಲಿ ಸಂಧಾನಸಂರಂಭ
ನೀವು ಬಿಜಯಂಗೈದು ಚಿತ್ತದ
ಲಾವಹದನಾ ಹದನನಾ ರಾ
ಜೀವನಾಭಂಗಱುಹಿ ಎಂದರು ಚರರು ಕೈಮುಗಿದು || ೧೦

ಏನು ಹದನೇನ್ನೇನು ವರಸಂ
ಧಾನವೇ, ಕೌರವರೊಡನೆ, ಸು
ಮ್ಮಾನವೇ ಪತಿಗಳಿಗೆ, ಪಾಪಿಗಳಿಱಿದರೋ ಸತಿಯ |
ದಾನವಾಂತಕನೆಸಗುವನೆ ತ
ಪ್ಪೇನು ತಪ್ಪೇನೆನುತ ನಸುಮುಸು
ಳ್ದಾನನಾಂಬುಜದಬಲೆ ಬಂದಳು ಕೃಷ್ಣನೋಲಗಕೆ || ೧೧

ಭ್ರೂಲತೆಯು ಸುರಚಾಪದ್ಯುರುಕೇ
ಶಾಳಿಗಳ ಕಾರ್ಮುಗಿಲಪಾಂಗದ
ಸಾಲ ಕುಡಿಮಿಂಚುಗಳ, ನೂಪುರರವದ ಮೊಳಗುಗಳ |
ಆ ಲತಾಂಗಿಯು ಗಮನವೇ ಮಳೆ
ಗಾಲದಂತಿರೆ ಧಾರ್ತರಾಷ್ಟ್ರಕು
ಲಾಳಿ ನಿಲುವುದೆ ಪವನಜನ ಸಂಪ್ರತಿಯು ಸೇರುವಿಗೆ ||

ಕವಿದ ಚಿತ್ರಾವಳಿಯ ದಡ್ಡಿಯ
ವಿವಿಧ ಭಟರುಗ್ಗಡಣೆಯುಲಿ ವರ
ಯುವತಿ ಬಂದಳು ಸಖಿಯರೊಯ್ಯಾ[illegible] |
ನವಬಲಾಹಕದೊಳಗೆ ಮಿಂಚಿನ
ಗವಿಸಹಿತ ಮಱಿಮೇಘವಾವಿ
ರ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ || ೧೩

ಎಲೆ ಸಮೀರಕುಮಾರ ಸಂಪ್ರತಿ
ಗೆಳಸಿದ್ದೈ ಕಲಿತನವ ನೀರಲಿ
ಕಲಕಿದ್ದೈ ಕೈವಾರವಾದುದೆ ಕೌರವೇಂದ್ರನಲಿ |

ಕಲಿಸಿದ್ದೈ ಕೃಷ್ಣಂಗೆ ನೀತಿಯು
ಬಳಸಿದ್ದೈ ಬಹುಮತವ ನರಕದೊ
ಳಿಳುಹಿದ್ದೈ ಶಶಿಕುಲವನೆಂದನಿಲಜನ ನೋಡಿದಳು ॥ ೧೪

ಬೇಡಲಟ್ಟುವನೇ ಮಹೀಪತಿ
ನಾಡೊಳೈದೂರುಗಳನವರಲಿ
ಮಾಡುವಾತನು ಕೃಷ್ಣನೇ ಸಂಧಾನವನು ನಿಮಗೆ ।
ಕೇಡುಗರ ಕೌರವನೃಪಾಲರ
ಕೂಡಿ ಬದುಕುವ ಭೀಮಸೇನನೆ
ರೂಢಿಸಿತಲಾ ನಿಮ್ಮ ಸಿರಿ ಸೋದರರ ಸೇರುವೆಗೆ ॥ ೧೫

ಯತಿಗಳಾದಿರಿ ನೀವು ರೋಷ
ಚ್ಯುತರಲೇ ಬಳಿಕೇನು ಧರ್ಮ
ಜ್ಞಾತೆಯ ನೆಲೆಗಳನಱಿದ ಮನವೆಱಗುವುದೆ ಕಾಳಗಕೆ ।
ಕ್ಷಿತಿಯ ಪಾಲಿಸುವುದು, ವಿರೋಧ
ವ್ಯತಿಕರವ ಬಿಸುಡುವುದು, ಕುಂತೀ
ಸುತರು ಕೌರವರೊಡನೆ ಸುಖದಲಿ ರಾಜ್ಯಮಾಡುವುದು ॥ ೧೬

ಭೀಮ ಬಲವದರಾತಿಸೇನಾ
ಭೀಮ ಕುರುಕುಲಕುಸುಮ ಮಾರ್ಗಣ
ಭೀಮ ಮಱೆದ್ದೈ ಮಾನಿನಿಯ ಘನಮಾನಹಾನಿಗಳ ।
ರಾಮನಬಲೆಗೆ ಕುದಿದ ಬಲು ಸಂ
ಗ್ರಾಮವನು ನೀ ಕೇಳ್ದಱಿಯಲಾ
ಪ್ರೇಮದಲಿ ನೋಡೆನ್ನನೆಂದಳು ದ್ರೌಪದೀದೇವಿ ॥ ೧೭

ಧರೆಗೆ ಕಟ್ಟಭಿಮಾನ ಹೆಂಡಿರ
ಹರಿಬವಾ ಹರಿಬದಲಿ ಕೆಡೆಹುವ
ರರಿಯುನವಗಡಿಸಿದರೆ ಸಾವರು ವಾಸಿಯುಳ್ಳವರು ।
ಸುರನರೋರಗರೊಳಗೆ ನಿಮ್ಮೈ
ವರಿಗೆ ಸರಿಯಿಲ್ಲೈವರಬಲೆಯ
ಹರಿಬದಲಿ ಹಂಗಾದರೆಂಬಪದೆಸೆಗೆ ನೋನುವರೆ ॥ ೧೮

ಸೋಲ ಗೆಲ್ಲುವದೇಕೆ ಕುರುವಂ
ಶಾಳಿಯಲಿ ಸೋದರರು ನೀವ್ ಪಾಂ
ಚಾಲರಾವೇ ಹೊಱಗು ನಿಮ್ಮೊಳು ಸಲುಗೆ ನಮಗೇಕೆ ।
ಮೇಳವೇ, ಸಿರಿ ಗಳಿಸಲರಿದು ಜ
ನಾಳಿ ಹೆಂಡಿರಪೂರ್ವವೇ ಕ್ಷಿತಿ
ಪಾಲಕರು ನೀವಾಗಲೆಮಗದು ಪರಮ ಪರಿಣಾಮ ॥ ೧೯

ಮುಂದಲೆಯ ಹಿಡಿದೆಳೆದು ಸಭೆಯಲಿ
ತಂದು ಸೀರೆಯ ಸೆಳೆದರವದಿರ
ಮುಂದೆ ಮೌನದೊಳಿದ್ದರಲ್ಲದೆ ಪತಿಗಳುಸುರಿದರೆ ।
ಅಂದು ನೀ ಹಿಂದಿಕ್ಕಿಕೊಂಡುದ
ನಿಂದು ಮಱೆದೈ ಸಂಧಿಗೋಸುಗ
ಮುಂದುವರಿವರೆ ಕೃಷ್ಣ ಎಂದಳು ದ್ರೌಪದೀದೇವಿ ॥ ೨೦

ತನಯರೈವರು ವೀರಸಹದೇ
ವನು ಘಟೋತ್ಕಚನೀ ಸುಭದ್ರಾ
ತನಯನೆಮ್ಮಯ ತಂದೆ ಮೂಱಕ್ಷೋಹಿಣೀಸೇನೆ ।
ಇನಿಬರೇ ಕಾದುವರು ದುಶ್ಶಾ
ಸನನ ರಕುತವ ಕುಡಿದು ಕುರುಕುಲ
ವನವ ಸುಡುವರು ನಿಮ್ಮ ಹಂಗೇಕೆಂದಳಿಂದುಮುಖಿ ॥ ೨೧

ವರಸತಿಯ ಬಿಸುಸುಯಿಲ ಗಾಳಿಯೊ
ಳುರಿ ಚಡಾಳಿಸೆ ರೋಷಮುಯುದು
ಬ್ಬರದಲೌಡೊತ್ತಿದನು ಹಿಡಿದನು ಖತಿಯನಹಿತರಲಿ ।
ತರುಣಿ ಸೈರಿಸು ಸೈರಿಸಿನ್ನೀ
ಸುರಿವ ಕಂಬನಿಗಳಿಗೆ ಶತಸಾ
ವಿರಮಡಿಯ ಕಂಬನಿಯ ಸುರಿಸುವೆ ಹಗೆಯ ಹೆಂಡಿರಲಿ॥ ೨೨

ಉರಿಯೊಗುವ ಮೀಸೆಗಳ ಬೆರಳಲಿ
ಮುರಿದು, ನೆಗಹಿದ ವಾಮಕರದಲಿ
ತರುಣಿಯನು ಸಂತೈಸಿ, ಕಿಡಿಕಿಡಿಯೋಗಿ ಖಾತಿಯಲಿ ।

ನರಕಮರ್ದನ ಕೇಳು ಕೌರವ
ನರಿಗಳಿದಿರೇ ಕೀಳುವೆನು ಕುಲ
ಗಿರಿಗಳನು ತೊಡೆವೆನು ಕೃತಾಂತನ ಭಾಳದಕ್ಕರವ ॥ ೨೩

ಯಮಸುತನ ಬಗೆಯಂತುಟೆಂದಾ
ಕ್ರಮಕೆ ಮೊಗದಿರುಹಿದೆನು ದಿಟವೀ
ಕಮಲವದನೆಯು ಹರಿಬವೆನ್ನದು ಪತಿಗಳಿಪ್ಪಿಬರಲಿ ।
ಎಮಗೆ ಸಂಪ್ರತಿಗಿಲ್ಲ ಮನ ಘನ
ಸಮರವೇ ಸರ್ವಾರ್ಥ ಕೋಪ
ಶ್ರಮಕೆ ರಿಪುರುಧಿರಾಂಬುಪಾನವೆ ವಿಪುಳ ಫಲವೆಂದ ॥ ೨೪

ಕೆಡಹಿ ರಿಪುಗಳ ಕರುಳದಂಡೆಯ
ಮುಡಿಸುವೆನು ಮಾನಿನಿಗೆ ರಕುತವ
ಕುಡಿಯಲೆಱೆವೆನು ಶಾಕಿನಿಯರಿಗೆ ತತ್ಸಹೋದರರ ।
ನಡೆದು ಸಂಧಿಯ ಮಾಡಿ ಮುರರಿಪು
ಕೊಡಿಸು ನಾಲ್ಕೂರುಗಳನಿವರಿಗೆ
ತಡೆಯದೆರಡೂರುಗಳ ಕೊಂಬೆನು ಕೌರವೇಂದ್ರನಲಿ ॥ ೨೫

ಕೆಲರು ಸಂಪ್ರತಿಗೊಲಿವರಿದಱೊಳು
ಕೆಲರು ವಿಗ್ರಹಕೆಳಸುವರು ನಿ
ಮ್ಮೊಳಗೆ ನಿಶ್ಚಯವಿಲ್ಲದಿರೆ ನೃಪಕಾರ್ಯವೆಂತಹುದು ।
ತಿಳಿದು ಹೇಳವನೀಶ ಪರಮಂ
ಡಲಕೆ ಪಯಣವ ಮಾಡುವರೆ ನಾ
ವಳುಕಿದವರಲ್ಲೆನಲು ಕೃಷ್ಣಂಗರಸನಿಂತೆಂದ ॥ ೨೬

ವಿದಿತವೈದೂರುಗಳ ಕೊಟ್ಟರೆ
ಹದುಳವಿಡುವುದು ಮುನಿದರಾದಡೆ
ಕದನವನೆ ಜೋಡಿಸುವುದುಚಿತಾನುಚಿತದನುವಱಿದು ।
ಹದನ ನೀನೇ ಬಲ್ಲೆ ಸಾಕಿ
ನ್ನಿದು ನಿದಾನವು ಬಗೆಯಲೆಮ್ಮ
ಭ್ಯುದಯ ನಿನ್ನಾಧೀನವೆಂದನು ಧರ್ಮನಂದನನು ॥ ೨೭

ಪಯಣವನು ನಿಶ್ಚೈಸಿ ದನುಜಾ
ರಿಯನು ಬೀಳ್ಕೊಂಡವನಿಪತಿ ಪಾ
ಳಯದೊಳಗೆ ಸಾರಿಸಿದನಗ್ಗದ ಮಂಡಳೀಕರಿಗೆ ।
ನಯವಿದನು ಮಱುದಿವಸ ಮಂಗಳ
ಮಯಮುಹೂರ್ತದ ಜೋಯಿಸರ ಜೋ
ಕೆಯ್ಯಲಿ ನಿರ್ಗಮನಿರತನಾದನು ಕೃಷ್ಣನೊಲವಿನಲಿ ॥ ೨೮

ಮೊರೆಯೆ ದುಂದುಭಿ ಶಂಖ ಕಹಳೆಗ
ಳುರು ಮೃದಂಗಾದಿಗಳು ಭೂಸುರ
ಸುರಭಿಗಳ ಬಲವಂದು ದಧಿದೂರ್ವಾಕ್ಷತಾದಿಗಳ ।
ಧರಿಸಿ ಧರಣೀದೇವರನು ಸ
ತ್ಕರಿಸಿ ಕರತಳದಿಂದ ನಾಸಿಕ
ದೆರಲ ಚಂದ್ರೋದಯವನೀಕ್ಷಿಸಿ ದೇವ ಹೊಱವಂಟ ॥ ೨೯

ಕಲಿತ ಸನ್ನಾಹದಲಿ ಸಾರಥಿ
ಸುಳಿಸಿದನು ಹೊಂದೇರನಭ್ರಕೆ
ತಳಿತವಮಲಚ್ಛತ್ರ ಚಾಮರ ಸಿತಪತಾಕೆಗಳು ।
ಅಳುಕೆ ನೆಲನಕ್ಷೋಣಿಬಲವಿ
ಟ್ಟಳಿಸಿ ನೆರೆದುದು ರಥಕೆ ದಾನವ
ಕುಲದಿಶಾಪಟ ಕೃಷ್ಣ ಬಿಜಯಂಗೈದನೊಲವಿನಲಿ ॥ ೩೦

ಕಳುಹುತೈತಂದಖಿಳಪಾಂಡವ
ಬಲಕೆ ನೇಮವ ಕೊಟ್ಟು ಧರ್ಮಜ
ಫಲುಗುಣರ ನಿಲಿಸಿದನು ವರ ಸಹದೇವ ನಕುಲರನು ।
ಕಳುಹಿದನು ನೀ ಮರಳೆನಲು ಬೆಂ
ಬಳಿಯಲನಿಲಜನೈದಿ ಹಗೆಯಲಿ
ಕಲಹವನೆ ಮಸೆಯೆಂದು ನಂಬುಗೆಗೊಂಡು ಮರಳಿದನು॥ ೩೧

ದೇವಿಯರು ನೀವ್ ಮರಳಿಯೆನೆ ರಾ
ಜೀವನಾಭನ ಹೊರೆಗೆ ದ್ರೌಪದಿ
ದೇವಿ ಬಂದಳು ಹಣೆಯ ಚಾಚಿದಳಂಘ್ರಿಕಮಲದಲಿ ।

ಸ್ಥಾವರಕೆ ಜಂಗಮಕೆ ನೀನೇ
ಜೀವಚೇಷ್ಟಕನವದಿರಂತ
ರ್ಭಾವವನು ನೀ ಬಲಿಯಲಾಗದು ಸಂದಿಕಾರ್ಯದಲಿ ॥ ೩೨

ಖಳರು ತಮ್ಮುನ್ನತಿಯ ಕೀಲನು
ಕಳಚಿ ಕಳೆದರು ಮರಳಿ ಹೂಡುವ
ಡಳುಕಿದರು ನನ್ನವರು ಪತಿಗಳೆ ಪರಮವೈರಿಗಳು ।
ಹಳಿವ ನೀನೇ ಬಲ್ಲೆಯೆನ್ನಯ
ವುಳಿವ ನೀನೇ ಬಲ್ಲೆ ಹರಿದಾ
ಗಳಲಿದೆನು ಸಲಹೆನುತ ಕಂಬನಿದುಂಬಿದಳು ಅಬಲೆ ॥ ೩೩

ಏಳು ತಾಯೆ ಸರೋಜಮುಖಿ ವಿಪಿ
ನಾಲಯದೊಳತಿ ನವೆದೆ ನಿನ್ನವ
ರಾಳಿಗೊಂಡಂದವನು ಬಲ್ಲೆನು ನಿನ್ನ ಹರಿಬದಲಿ ।
ಕಾಳಗವನೇ ಬಲಿದು ಬಹೆನಿವ
ರೇಳಿಲವ ಮಾಡಿದರೆ ರಿಪುಗಳ
ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ ॥ ೩೪

ದೇವಕಿಯ ಮೇಲಾಣೆ ವರ ವಸು
ದೇವನಂಘ್ರಿಗಳಾಣೆ ಮನ್ಮಥ
ದೇವನಾಣೆ ನಿದಾನವನು ಕೇಳಬಲೆ ನಿನ್ನಾಣೆ ।
ನಾವು ಸಂಧಿಯ ನೆವದಲವದಿರ
ಭಾವವನು ಕಲಿಮಾಡಿ ಕೋಪವ
ತೀವಿ ಸಂಧಿಯ ಮುರಿದು ಬಹೆವಿದ ನಂಬು ನೀನೆಂದ ॥ ೩೫

ಮರಳಿದಳು ತರಳಾಕ್ಷಿ ಮುರರಿಪು
ಬರುತ ಮುಂಬಟ್ಟೆಯಲಿ ಕಂಡನು
ವರಭರದ್ವಾಜಾಖ್ಯ ಗೌತಮ ಕಣ್ವ ಕೌಶಿಕರ ।
ಉರಗಮಾಲಿ ಮತಂಗ ಗಾರ್ಗ್ಯಾಂ
ಗಿರಸ ನಾರದ ಶುಕ ಪರಾಶರ
ಪರಶುರಾಮ ಶ್ವೇತಕೇತು ಪ್ರಮುಖ ಮುನಿವರರ ॥ ೩೬

ಮುನಿವರರನುಪಚರಿಸಿದನು ಹ
ಸ್ತಿನಪುರಿಗೆ ಸಂಘಾತದಲಿ ಬಹೆ
ವೆನಲು ಬರಹೇಳಿದನು ಸಕಲ ಮಹಾ ತಪೋಧನರ ।
ಘನಕುಶಸ್ಥಳಪುರದೊಳೆಡೆಗೈ
ದನು ಸುಯೋಧನನಲ್ಲಿಗಟ್ಟಿದ
ವಿನುತ ದೂತರು ಬಿನ್ನವಿಸಿದರು ಮುರಹರನ ಬರವ ॥ ೩೭

ಕೇಳಿದನು ಧೃತರಾಷ್ಟ್ರನಾ ಸಿರಿ
ಲೋಲನಾಗಮನವನು ಚಿತ್ತವ
ಹೂಳಿ ಹೆಚ್ಚಿದ ಹರುಷ ಮಿಗಲುಬ್ಬೆದ್ದನಡಿಗಡಿಗ ।
ಹೇಳಿದನು ವಿದುರಂಗೆ ಭಂಡಾ
ರಾಲಯದೊಳುಳ್ಳಮಲ ಮುತ್ತಿನ
ಜಾಳಿಗೆಯ ಪೆಟ್ಟಿಗೆಯಲಾಯ್ದರು ಸಾರವಸ್ತುಗಳ ॥ ೩೮

ಎಲೆ ವಿದುರ ಕೇಳ್ಕೈ ಸುಯೋಧನ
ನುಳಿಯಲಖಿಳ ಮಹಾ ಪ್ರಧಾನರು
ನಳಿನನಾಭನನಿದಿರುಗೊಳಲಿ ಕೃತಾರ್ಥರಾದವರು
ಹೊಳಲು ಗುಡಿ ತೋರಣವಲೆಸೆಯಲಿ
ಕಳಸ ಕನ್ನಡಿಸಹಿತ ನಡೆಯಲಿ
ನಳಿನವದನೆಯರೆಂದು ನೇಮಿಸಿದನು ಮಹೀಪಾಲ ॥ ೩೯

ತೆಗೆ ಸುವಸ್ತುವನೀಯದಿರು, ಹರಿ
ಹಗೆ ಕರ್ಣಾ ಕುಂತೀಕುಮಾರರು
ಹಗೆಗಳೇ ಮನ್ನಿಸಿದರೆಂದುಳುಹುವನೆ ಮುರವೈರಿ ।
ನಗರಿಗಾತನು ಬರಲಿ ಯಾದವ
ನಗಡುತನಕೌಷಧವ ಬಲ್ಲೆನು,
ಬಿಗಿದು ಕೆಡಹುವೆನೆಂದು ನುಡಿದನು ಕೌರವರ ರಾಯ ॥ ೪೦

ಖಾತಿಗೊಂಡನು ಭೀಷ್ಮನೆಲೆ ಕಡು
ಪಾತಕಿಯೆ ನೀ ಕೃಷ್ಣನನು ಬಿಗಿ
ವಾತನೇ ಬಳಿಕೇನು ಬಲ್ಲೆನು ನಿನ್ನ ಸಾಹಸವ ।

ಈತನಾಡುವ ಮಾತ ಕೇಳಲು
ಪಾತಕವು ಬಹುದೆಂದು ಗಂಗಾ
ಜಾತನೋಲಗದಿಂದ ಸರಿದನು ತನ್ನ ಮಂದಿರಕೆ ॥ ೪೧

ಪುರವ ರಚಿಸಿದರುದಯದಲಿ ವಿ
ಸ್ತರ ಮಿಗಲು ಗಾಂಗೇಯ ಗೌತಮ
ಗುರು ವಿದುರ ಶಲ್ಯಾದಿ ಸುಜನರು ಬಂದರಿದಿರಾಗಿ ।
ತರುಣಿಯರು ಕೆಂದಳಿರ ಕಲಶದ
ಕರತಳದ ಗರುವಾಯಿಯಲಿ ಪ್ಷಂ
ಕರುಹನಾಭನನಿದಿರುಗೊಂಡರು ವಿತತ ವಿಭವದಲಿ ॥ ೪೨

ಮಂದಿ ವೈಯ್ಯಿಕ್ಕಿತು ಮುರಾಂತಕ
ಗಂದು ಮನದೊಲವಿನಲಿ ಗಂಗಾ
ನಂದನ ದ್ರೋಣಾದಿಗಳನೆತ್ತಿದನು ಕರುಣದಲಿ ।
ಮಂದಿರದ ಸುಕ್ಷೇಮಕುಶಲವ
ನಂದು ಕೇಳುತ ವೀಳಯವನಾ
ಮಂದಿಗಿತ್ತನು ದೇವ ಬಂದನು ಹಸ್ತಿನಾಪುರಿಗೆ ॥ ೪೩

ಗಿಳಿಯು ತುಂಬಿಯು ಹಂಸೆಗಳ ಕ್ರೋ
ಗಿಲೆಯು ಕೊರಳ್ವಕ್ಕಿಗಳ ಕೊಂಚೆಯು
ಕೊಳಲುವಕ್ಕಿಯು ಜಕ್ಕವಕ್ಕಿಯು ನವಿಲ ಪಾರಿವದ ।
ಕಳರವದ ಕರ್ಣಾವ್ರುತದ ತನಿ
ವಳಿಯು ಕಱಿದುದು ಯಾದವೇಂದ್ರನ
ಬಲದ ಕಿವಿಯೊಳಗಿಭಪುರಿಯ ಹೊಱವಳಯದುದ್ಯಾನ ॥ ೪೪

ಹೊಗಳುತ್ತೈತಂದಸುರರಿಪು ಗಜ
ನಗರಿಯನು ಹೊಕ್ಕನು ಸುಯೋಧನ
ನಗಣಿತೈಶ್ವರ್ಯಕೆ ಮಹಾದೇವೆನುತ ತಲೆದೂಗಿ ।
ಬಿಗಿದ ಬೀದಿಯ ನಯದ ನೆಲಗ
ಟ್ಟುಗಳ ರತ್ನದ ಹೇಮದುಪ್ಪರಿ
ಗೆಗಳ ಕೇರಿಗಳೊಳಗೆ ಬರುತಿರ್ದನು ಮುರಧ್ವಂಸಿ ॥ ೪೫

ಮಂದೆಯಲಿ ಸುಳಿವಾನೆ ಕುದುರೆಯ
ಸಂದಣಿಯ ಕೇಲಿಸಿದ ಭೂಮಿಪ
ರಂದಣದ ಸಾಲುಗಳ ತೆಕ್ಕೆಯ ಬಿರುದಿನಾಳುಗಳ ।
ಮಂದಿಯಲಿ ಹೊಗಲನಿಲಗುಬ್ಬಸ
ವೆಂದರುಳಿದರಿಗಳವೆಯೆನುತರ
ವಿಂದನಾಭನು ಬಂದನಾ ಧೃತರಾಷ್ಟ್ರನರಮನೆಗೆ ॥ ೪೬

ಇದಿರುವಂದನು ಕಾಣಿಕೆಯನಿ
ಕ್ಕಿದನು ಕುಶಲಕ್ಷೇಮವನು ಕೇ
ಳಿದನು ಭಕ್ತಿಯಲೆಱಗಿದನು ಚರಣದಲಿ ಧೃತರಾಷ್ಟ್ರ ।
ಸದನವನು ಹೊಕ್ಕಂತೆ ನಿಮಿಷಾ
ರ್ಧದಲಿ ಕುಳ್ಳಿರ್ದನಿಬರನು ಕಳು
ಹಿದನು ಕಾರುಣ್ಯದಲಿ ಗದುಗಿನ ವೀರನಾರಯಣ ॥ ೪೭

## ೬. ನಾಳೆ ಬರಹೇಳು

ಕೇಳು ಜನಮೇಜಯ ಧರಿತ್ರೀ
ಪಾಲ ಮುರರಿಪು ಗುರುನದೀಜರ
ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು ।
ಆಲಯಕೆ ವಿದುರಂಗೆ ಕೊಟ್ಟನು
ವೀಳಯವನೊಡನೈದಿ ಬಂದ ನೃ
ಪಾಲಕರ ಮೊಗಸನ್ನೆಯಲಿ ಕಳುಹಿದನು ಮನೆಗಳಿಗೆ ॥ ೧

ಶೌರಿ ಕಾಣಿಸಿಕೊಂಡನಾ ಗಾಂ
ಧಾರಿಯನು ಸುಕ್ಷೇಮಕುಶಲವ
ನಾರಯಿದು ಕಾಣಿಕೆಯ ಕೊಂಡನು ಕೊಟ್ಟನುಡುಗೊಱೆಯ ।
ಕೌರವನು ತನ್ನರಮನೆಗೆ ಹರಿ
ಬಾರದಿರನೆಂದಖಿಲ ವಿಧದಲಿ
ಸಾರವಸ್ತುವ ತರಿಸಿಯಾರೋಗಣೆಗೆ ಮಾಡಿಸಿದ ॥ ೨

ನಡುವೆ ಮಣಿಮಂಚದಲಿ ಮೆಲ್ಪಾ
ಸಡಕಿಲನು ಹಚ್ಚಡಿಸಿದರು ಮೇ
ಲಡಸಿದರು ನವರತ್ನಖಚಿತದ ಮೇಲುಕಟ್ಟುಗಳ ।
ಉಡುಗೊಱೆಯು ತರಿಸಿದನು ರಾಯನ
ಮಡದಿಯರು ಹೊಂಗಳಸ ಜಲವನು
ಪಡಿಗವನು ಹಿಡಿದಸುರರಿಪುವಿನ ಬರವ ಹಾರಿದರು ॥ ೩

ತವತವಗೆ ಗಾಂಗೇಯ ಗುರು ಕೃಪ
ರವಿಸುತಾದಿಗಳಸುರರಿಪು ನಿಜ
ಭವನಕೈತಹನೆಂದು ಸವೆದರು ಸಾರವಸ್ತುಗಳ ।
ಅವನಿಪನ ಬೀಳ್ಕೊಂಡು ಕೌರವ
ಭವನವನು ಹಿಂದಿಕ್ಕಿ ವರಭಾ
ಗವತ ಮಸ್ತಕ ರತುನ ವಿದುರನ ಮನೆಗೆ ನಡೆತಂದ ॥ ೪

ಕರಣ ನಿರ್ಮಳವಾಯ್ತು ಮನವು
ಬ್ಬರಿಸಿತತಿಪರಿತೋಷ ಮಿಗೆ ತಾ
ಪರಮಸುಖದಲಿ ತನುವ ಮಱೆದನು ನಯನಜಲವುಗಲು ।

ಎರಡುದೋಱದ ಗಾಢಭಕ್ತಿಯ
ಭರದ ಲವಲವಿಕೆಯಲಿ ನಿಜಮಂ
ದಿರವ ಹೊಱವಡುತತ್ತ ಕಂಡನು ವಿದುರನಚ್ಯುತನ ॥ ೫

ಸಿರಿಮೊಗದ ಕಿಱುಬೆಮರ, ತೇಜಿಯ
ಖುರಪುಟದ ಕೆಂದೂಳಿ ಸೋಂಕಿದ
ಸಿರಿಮುಡಿಯ, ಕೊನೆಮೀಸೆಯಲಿ ಕೆಂಪಡರ್ದ ರೇಣುಗಳ, ।
ಖರಮರೀಚಿಯ ಝಳಕೆ ಬಾಡಿದ
ತರುಣತುಳಸಿಯ ದಂಡೆಯೊಪ್ಪುವ,
ಗರುವದೇವನ ಬರವ ಕಂಡನು ಬಾಗಿಲಲಿ ವಿದುರ ॥ ೬

ತನುವ ಮಱೆದನು, ಪುಳಕಜಲದಲಿ
ನೆನೆದು, ನಾರಾಯಣನ ಪದ ದ
ರ್ಶನದ ಹರ್ಷಾರಣ್ಯದಲಿ ಮನ ಹೊಲಬುದಪ್ಪಿದನು, ॥
ನೆನೆವ ಸನಕಾದಿಗಳಿಗಿನ್ನುಂ
ಮನಗುಡದ ಮಹಿಮಾತಿರೇಕನು,
ಮನೆಗೆ ಬಹ ಕರುಣಾಳುತನ, ಹೊಸತೆನುತ ಹಿಗ್ಗಿದನು, ॥ ೭

ನೋಡಿದನು ಮನದಣಿಯೆ, ಮಿಗೆ ಕೊಂ
ಡಾಡಿದನು, ಬೀದಿಯಲಿ ಹರಿದೆಡೆ
ಯಾಡಿದನು, ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ । ೮
ಕೂಡಿ ಕುಣಿದನು ಮನೆಯ ಮಱೆದೀ
ಡಾಡಿದನು ವೈಮಱೆದು ಹರುಷದ
ಗಾಡಿಕೆಯಲಪ್ರತಿಮನೆಸೆದನು ಭಕ್ತಿಕೇಳಿಯಲಿ ॥ ೮

ಹಸಿದು ನಾವೈತಂದಡೀ ಪರಿ
ಮಸಗಿ ಕುಣಿದಾಡಿದರೆ ಮೇಣೀ
ವಸತಿಯನು ನೀ ಮಱೆದು ಬಿಸುಟರೆ ನಮಗೆ ತಣಿವಹುದೆ ।
ವಸುಮತೀವಲ್ಲಭನವರು ಪ್ರಾ
ರ್ಥಿಸಿದರೊಲ್ಲದೆ ಬಂದೆವೈ ನಾ
ಚಿಸದಿರ್ದ್ದೆ ಬಾ ವಿದುರ ಎನುತೊಳಹೊಕ್ಕನಸುರಾರಿ ॥ ೯

ವರವು ಕೌತುಕವು ಪಾಲ್ಗಡ
ಲೊಳಗೆ ಮಲಗಿಹ ವಿಷ್ಣು ವಿದುರನ
ನಿಲಯದೊಳಗೊಕ್ಕುಡಿತೆ ಹಾಲಲಿ ಹಸಿವ ನೂಕಿದನು ।
ಹೊಲಬುಗೆಡಿಸಿದನಖಿಲ ನಿಗಮಂ
ಗಳನು ತನ್ನಂಕೆಯಲಿ ಭಜಕಂ
ಗೊಲಿದು ತಾನ್ಯೆತಹುದು ಕರುಣದ ಘನತೆಯೆನೆ ಲೋಕ ॥ ೧೦

ಉರಿಯ ಪದಕಮಲಾಭಿಷೇಕದ
ವರಪಯೋಬಿಂದುಗಳು ಕೌರವ
ನರಮನೆಯನೊಳಗೊಂಬವೊಲು ಕಡಲಾಗಿ ಹರಿತರಲು ।
ಆರರೆ ಮುರಹರನೊಡನೆ ಹಾಲಿನ
ಶರಧಿ ಮೇರೆಯನೊಡೆದುದಿಳೆಗ
ಚ್ಚರಿಯೆನುತ ಭೀಷ್ಮಾದಿಗಳು ಹೊಗಳಿದರು ಹರುಷದಲಿ ॥ ೧೧

ತೊಲಗಿದಸು ಬಂದಂತೆ ತರಣಿಯ
ಹೊಳಹು ಸೋಂಕಿದ ಜಕ್ಕವಕ್ಕಿಯ
ಬಳಗದಂತಿರೆ ಕೃಷ್ಣರಾಯನ ಬರವ ತಾ ಕೇಳ್ದು ।
ಪುಳಕ ಪಸರಿಸೆ ಪರಮ ಹರ್ಷವ
ತಳೆದು ದೇವನ ಕಾಣಿಕೆಯ ಕಂ
ಗಳಿಗೆ ಕಡುಲೋಲುಪತೆ ಮಿಗೆ ಹರಿತಂದಳಾ ಕುಂತಿ ॥ ೧೨

ಬರವ ಕಂಡಸುರಾರಿ ಮಂಚದೊ
ಳಿರದೆ ದಿಮ್ಮನೆ ನಿಂದು ನರರಾ
ಚರಣೆಗಳ ನಾಟಕವ ತಾನೇ ನಟಿಸಿ ತೋಱಿದನು ।
ಹಿರಿಯರಿಗೆ ತಾ ಹಿರಿಯನೆಂಬೀ
ಗರುವತನವನು ಬಿಸುಟು ಕುಂತಿಗೆ
ಕರವ ಮುಗಿದನು ಸಕಲ ಸನಕಾದಿಗಳು ನಲಿದಾಡೆ ॥ ೧೩

ಅಮಿತಕರುಣಾಸಿಂಧುವಿನ ಪದ
ಕಮಲದಲಿ ತಾನೆಱಗಿ ಪುಳಕೋ
ದ್ಗಮದ ಪಾವನತರದ ಸುಖಸಂರಂಭದಲಿ ಮುಳುಗಿ ।

ಗಮಿಸಲರಿಯವು ಗರುವ ವೇದ
ಪ್ರಮಿತಿಗಳು ನೀನೆಂತು ನಡೆತಂ
ದೆಮಗೆ ಗೋಚರವಾದೆಯೆನುತವೆ ಹೊಗಳಿದಳು ಕುಂತಿ ॥ ೧೪

ದೇವಕಿಯು ವಸುದೇವನನು ಬಲ
ದೇವ ಸೌಭದ್ರಾದಿ ಯದು ಭೂ
ಪಾವಳಿಯ ಸುಕ್ಷೇಮಕುಶಲವ ಕುಂತಿ ಬೆಸಗೊಳಲು ।
ದೇವ ನಗೆಮೊಗದಿಂದ ವರ ವಸು
ದೇವ ದೇವಕಿಯಾದಿ ಯಾದವ
ರಾ ವಿಲಾಸದ ಮಹಿಪರಿರ್ಥವನು ಕುಂತಿಗರುಹಿದನು ॥ ೧೫

ಯಮತನುಜನಧಿಕನು, ಹಿಡಿಂಬಾ
ರಮಣನತಿ ಬಲ್ಲಿದನು ಪಾರ್ಥನ
ವಿಮಳ ವಿಗ್ರಹ ಲೇಸು ಸಕಲ ಮಹೀಶ ಪರಿವೃತರು ।
ಯಮಳರಿರವತಿ ಚೆಲುವು ನೇಹದ
ರಮಣಿಯಾಕೆಯ ಸುತರು ಸುಮಹೋ
ದ್ಯಮರು ಕೇಳೆಂದಸುರರಿಪು ಕುಂತಿಗೆ ನಿಯಾಮಿಸಿದ ॥ ೧೬

ಲೋಕ ಮೆಚ್ಚಲು ನಿನ್ನ ಸುತರು ದೃ
ಢೈಕ ಸತ್ಯರು ನುಡಿದ ಕಾಲವ
ನೂಕಿದರು ರಾಜ್ಯಾಭಿಲಾಷೆಗೆ ಬಲವ ನೆರಹಿದರು ।
ಆ ಕುಮಾರರಿಗರ್ಧರಾಜ್ಯವ
ನೀ ಕುಠಾರನೊಳೀಸಿಕೊಡುವ ವಿ
ವೇಕದಲಿ ತಾ ಬಂದೆನೆಂದನು ಕುಂತಿಗಸುರಾರಿ ॥ ೧೭

ಪರಮ ಪರಿತೋಷದಲಿ ಕೃಷ್ಣನ
ವರ ಸುಧಾಮಯ ವಚನವನು ಪಂ
ಕರುಹಮುಖಿ ಕೇಳುತ್ತ ನೆನೆದಳು ನಯನವಾರಿಯಲಿ ।
ಮುರಮಥನನಾ ಕುಂತಿಗೆಲ್ಲವ
ನೊರೆದು ವಿದುರನ ಕರೆದು ಕೌರವ
ನರಮನೆಯ ಸಮಯವನು ನೋಡಿದು ನಮಗೆ ಹೇಳೆಂದ ॥ ೧೮

ಹೋಗು ನೀನಾತಂಗೆ ಪಾಂಡವ
ರಾಗಸಮುದಯ ಬಂದನೆಂಬುದ
ನೀಗಲರುಹುವುದಾತ ಮಾಡುವ ನಯದ ಬಳವಿಗೆಯ ।
ತಾಗುಬಾಗಿನ ಹವಣನಾತನ
ಲಾಗ ನೋಡುವೆವೆನಲು ಕುರುಕುಲ
ಸಾಗರಾಗ್ನಿಯ ಮನೆಗೆ ಬಂದನು ವಿದುರ ಹರಿ ಬೆಸಸೆ ॥ ೧೯

ಇಲಗದೊಳಿರ್ದಖಿಳ ಮೂರ್ಖರ
ಮೌಳಿಯನು ಕಂಡವಧರಿಸು ಸಿರಿ
ಲೋಲ ಬಿಜಯಂಗೈಯಲವಸರವುಂಟೆ ಹೇಳೆನಲು ।
ನಾಳೆ ಕಾಣಿಸಿಕೊಂಬೆವಿನ್ನೇ
ನಾಳಿಕಾರನ ಬರವು ಹಗೆಗಳ
ಪಾಲಿಸುವ ಭರ ಸಂಧಿಕಾರ್ಯಕೆ ಬಾರದಿರನೆಂದ । ೨೦

ನೋಡಿರೈ ಪಾಂಡವರು ಪಾತಕ
ರಾಡುವಾಟವನಾಡಿದಡಮಾ
ನಾಡಿನೊಳಗಿದು ಸಲುವುದವನಿಯೊಳಧಿಕ ಲೇಸೆನಿಸಿ ।
ರೂಢಿಯೊಳಗಾಚಾರವಡಗಿತು
ಜೋಡೆಯಲಿ ಜನಿಸಿದರನೀ ಕೇ
ಡಾಡಿ ಕೂಡಿದನೆಂದು ಹೊಯ್ದನು ರವಿಸುತನ ಕರವ ॥ ೨೧

ನಾಳೆ ಬರಹೇಳೆಂದು ವಿದುರನ
ಬೀಳುಕೊಟ್ಟನು ಬೇಹ ಭಟರಿಗೆ
ವೀಳಯವ ನೀಡಿದನು ಹರೆದುದು ನೃಪತಿಯಾಸ್ಥಾನ ।
ಚಾಳಿಸಿತು ತಮ, ಮೂಡಣಾದ್ರಿಯ
ಮೇಲೆ ತಲೆದೋರಿದನು ರವಿ, ಭೂ
ಪಾಲ ಕೌರವನಂದಿನೊಡ್ಡೋಲಗವ ರಚಿಸಿದನು ॥ ೨೨

ಕರಸಿದನು ಮಣಿಮುಕುಟಕಿರಣದ
ಗರುವರನು, ಗಾಢಪ್ರತಾಪರ
ಬರಸಿದನು, ತೂಕದ ಮಹಾಮಂಡಳಿಕ ಮನ್ನೆಯರ ।

ಧುರವಿಜಯುಸಿದ್ಧರನು ಚಾವಿಾ
ಕರದ ಗದ್ದುಗೆಯುಖಿಳಸಾವಂ
ತರನು ಪೃಥ್ವೀಪಾಲರನು ನೆರಹಿದನು ಕುರುರಾಯ ॥ ೨೩

ಬಲದ ಗದ್ದುಗೆಗಳಲಿ ಭಟರ
ಗ್ಗಳಿಯು ರವಿಸುತ, ನದಿಯ ಮಗ, ನೃಪ
ತಿಲಕ ದುಶ್ಶಾಸನ, ಕೃಪ, ದ್ರೋಣಾದಿ, ನಾಯಕರು ।
ಹೊಳೆವ ರತುನದ, ಸಾಲ ಮಕುಟದ,
ಚೆಲುವಿಕೆಯ ಸಂರಂಭದಲಿ ಗಜ
ಗಲಿಸಿಧರು ಮಾಣಿಕ್ಯಮಯ ಭೂಷಣ ವಿಲಾಸದಲಿ ॥ ೨೪

ಸತಿಸಹಿತ ಧೃತರಾಷ್ಟ್ರಭೂಪತಿ
ಸುತನ ಬಲವಂಕದಲಿ ಕನಕೋ
ಚಿತದ ಪೀಠದಲೆಸೆದನಾತನ ಬಲದ ಭಾಗದಲಿ ।
ಚತುರ ಚತುರಾನನರು, ತರ್ಕ
ಶ್ರುತಿ ಸಮಸ್ತ ಕಳಾಸ್ವತಂತ್ರರು
ನುತಗುಣರು ನೃಪಸಭೆಯಲೆಸೆದುದು ಸೂರಿ ಸಂದೋಹ ॥ ೨೫

ತರುಣ ಶೃಂಗಾರದ ಸಭಾಬಂ
ಧುರರು ನೂರ್ವರು ಕೌರವೇಂದ್ರನ
ವರ ಕುಮಾರರು ಮುಂದೆ ಮೆಱೆದರು ಲಕ್ಷಣಾದಿಗಳು ।
ವರ ಕಿರೀಟದ ಕಾಲ ತೊಡರಿನ
ಕೊರಳ ಪದಕದ ಕೈಯ ಸುರಗಿಯ
ಲರಸನನುಜರು ನೂರ್ವರೆಡಮಂಕದಲಿ ಮೋಹಿದರು ॥ ೨೬

ಮಿಸುಪ ತಮ್ಮ ಮುಖೇಂದುವನು
ರಿಸದೆ ಚಂದ್ರನ ಕಿತ್ತು ನಭದಲಿ
ಬಿಸುಟು ಬೇರ್ಗಳ ಹಿಡಿದರೋ ಹೇಳೆನಲು ಸಭೆಯೊಳಗೆ ।
ಶಶಿವದನೆಯರ ಕೈಯ ಸೀಗುರಿ
ಎಸೆದವಿಕ್ಕೆಲದಲಿ ಸುಯೋಧನ
ವಸುಮತೀಶನ ವೈಭವದಲಾಸ್ಥಾನ ಚೆಲುವಾಯ್ತು ॥ ೨೭

ಮುರಿದು ನೋಡಿದಡಖಿಳ ರಾಯರು
ಸಿರವ ಬಾಗಲು ಲಾಳ ಮಾಳವ
ತುರುಕ ಕೊಂಕಣ ಗೌಳ ಗುಜ್ಜರ ವಂಗ ಹಮ್ಮೀರ।
ವರ ಕಳಿಂಗಾದಿಗಳು ಬೆಸಸೆನು
ತಿರಲು ಕೋಮಲಿಕೆಯರು ಸಿತ ಚಾ
ಮರವ ಚಿಮ್ಮಲು ಮಹಿಪ ಮೆಱೆದನು ಸಿಂಹಪೀಠದಲಿ ॥ ೨೮

ಆವ ರೀತಿಯದಾವ ವಿಸ್ತರ
ವಾವ ದೇಶದ ಸಿರಿಯು ಸಡಗರ
ವಾವ ಪರಿಯ ವಿಲಾಸವಾವ ವಿಡಾಯಿ ತಾನೆನಲು।
ಹಾವು ಹಳವಿಗೆಯಾದ ರಾಯನು
ರಾವಣಾರಿಯ ಕಾಣಿಕೆಗೆ ಬಲು
ಠೀವಿಯನು ತೋಱಿದನು ಸಾಱುವ ಭಟ್ಟರೋಳಿಯಲಿ ॥ ೨೯

ಬರಲಿ ಕರೆ ಕೈತವದ ಶಿಕ್ಷಾ
ಗುರುವನೆಂದವನೀಶ ದೂತರ
ಹರಿಯ ಬಿಟ್ಟನು ಹರಿಯ ನಿಳಯಕೆ ಹರಿಯ ವೇಗದಲಿ।
ಚರರು ಹರಿತಂದಸುರರಿಪುವಿನ
ಚರಣದಲಿ ಮೈಯಿಕ್ಕಿ ನೊಸಲಲಿ
ಕರಪುಟಾಂಜಲಿ ಮೆಱೆವುತಿರೆ ಬಿನ್ನಹವ ಮಾಡಿದರು ॥ ೩೦

ದೇವ ದೇವರ ಸಮಯವೆನೆ ರಾ
ಜೀವನಾಭನು ಮುಗುಳುನಗೆಯಲಿ
ಭಾವನವರಟ್ಟಿದರೆ ಹರಹರ ಬಹೆವು ನಾವೆನುತ।
ರಾವಣನ ಪರಿ ನೆಲಸಿತಿವನಲಿ
ಸಾವಿಗಂಜುವನಲ್ಲ ಖಳ ಮಾ
ಯಾವಿದನು ನಮ್ಮುಕುತಿ ಕೊಳ್ಳದು ವಿದುರ ಕೇಳೆಂದ । ೩೧

ಎನುತ ಮಂಚವನಿಳಿದು ವರಕಾಂ
ಚನ ವರೂಥಕೆ ಕೈಗೊಡುವ ಯದು
ಜನಪರುಗ್ಗಡನೆಯಲಿ ಬಿಜಯಂಗೈದನಸುರಾರಿ।

ಮುನಿನಿಕರ ಸಂದಣಿಸಿತ್ರಭ್ರುದೊ
ಳನಿಮಿಷಾವಳಿ ನೆರೆದುದಿಭಪುರ
ಜನವೊಡನೆ ನಡೆತರಲು ಹರಿ ಬರುತಿರ್ದನೋಲಗಕೆ ॥ ೩೨

ಕಲಿಮಲದಿ ಹೊಲೆಗಲಸಿದಿಭಪುರಿ
ಯೊಳಗೆ ನಿರ್ಮಳವಾಯ್ತು ಕೃಷ್ಣನ
ಸುಲಭ ದರ್ಶನದಿಂದ ಬೆಂದವು ಜನರ ಭವಬೀಜ ।
ಲಲನೆಯರು ತಂತಮ್ಮ ನಯನಂ
ಗಳಿಗೆ ದೇವನ ತಂದು ಸಮ್ಮದ
ಪುಳಕಿತಾಂಗಿಯರಾದರೆಲೆ ಜನಮೇಜಯ ಕ್ಷಿತಿಪ ॥ ೩೩

ಕಂಜಸಂಭವ ಪಿತನು ಬಂದನು
ನಂಜಿನಲಿ ಪವಡಿಸುವ ಬಂದನು
ಕುಂಜರನ ಮೊಱೆಗೇಳಿ ಸಲಹಿದ ದೇವ ತಾ ಬಂದ ।
ಅಂಜಿದಸುರನ ಕಾಯ್ದ ಬಂದನು
ಭಂಜನೆಗೆ ಬಲು ದೈವ ಬಂದ ಧ
ನಂಜಯಾದ್ಯರ ಭಾವ ಬಂದನು ನೃಪತಿಯೋಲಗಕೆ ॥ ೩೪

ದೇವಬಂದನು ತನ್ನ ನೆನೆವರ
ಕಾವ ಬಂದನು ದೈತ್ಯ ಕುಲವನ
ದಾವ ಬಂದನು ಭಾಗವತಜನಲೋಲುಪನು ಬಂದ ।
ಭಾವಿಸುವಡಘಹಾರಿ ಬಂದನು
ಓವಿ ಭಜಿಸಲು ತನ್ನ ಬೀಱುವ
ದೇವ ಗದುಗಿನ ವೀರನರಯಣ ಬಂದನೋಲಗಕೆ ॥ ೩೫

ಕ್ಷೀರವಾರಿಧಿಶಯನ ಬಂದನು
ವಾರಿಜೋದರ ಕೃಷ್ಣ ಬಂದನು
ಧಾರಿಣಿಯ ಹೊಱೆಗಳೆಯಲೋಸುಗ ಮನುಜ ವೇಷದಲಿ ।
ಭೂರಿದೈತ್ಯರನೊರಸಿ ಕೌರವ
ವಾರಿಧಿಯ ಮುಕ್ಕಳಿಸಲೆಂದೇ
ಘೋರನೈತರುತಿರ್ದನಂದು ನೃಪಾಲನೋಲಗಕೆ ೩೬

ಬಂಲು ಮುರಹರನಿದಿರುವಂದುದು
ಸುರನದೀಜ ದ್ರೋಣ ಗೌತಮ
ಗುರುಸುತಾದ್ಯ ಸಮಸ್ತ ಭೂಪ ಚಮೂಪ ಸಂದೋಹ ।
ಚರಣದಲಿ ಚಾಚಿದರು ಭೂಮೀ
ಶ್ವರರು ಮಕುಟವನಂತ ತಾರಾ
ಪರಿವೃತೇಂದುವಿನಂತೆ ಮೆಱೆದುದು ಹರಿಯ ಪದನಖರ ॥ ೩೭

ಅರಿದಲ್ಲೈ ಮುರಿವೈರಿ ಸನಕಾ
ದ್ಯರ ಸಮಾಧಿಗೆ ಸುಳಿಯದಂಘ್ರಿಯ
ದರುಶನದ ಫಲಭೋಗ ಸಾರಿದುದಸ್ಮದಾದ್ಯರಿಗೆ ।
ಸುರನರೋರುಗರೊಳು ಕೃತಾರ್ಥರು
ನಿರುತ ನಾವಲ್ಲದಡೆ ನಿಮ್ಮಯ
ಸರಸಿಜಾಂಘ್ರಿಯ ಸೇವೆ ದೊರಕುವುದಾವ ಮುನಿಗಳಿಗೆ ॥ ೩೮

ಎಂದು ಗಂಗಾನಂದನನು ನಲ
ವಿಂದ ಕೈಗೊಡೆ ಸುರಗಿರಿಯ ತುದಿ
ಯಿಂದ ಮುರಿಮಿಂಚುಗಳ ಮುಗಿಲಿಳಿವಂತೆ ಭೂತಳಕೆ ।
ಅಂದು ನೀಲಾಚಲನಿಕಾಯದ
ಸುಂದರಾಂಗದ ಕೌಸ್ತುಭಪ್ರಭೆ
ಯಿಂದ ಕಾಂಚನರಥವನಿಳಿದನು ದಾನವಧ್ವಂಸಿ ॥ ೩೯

ಸಮರಸರ್ವಜ್ಞರುಗಳಂಘ್ರಿಗೆ
ನಮಿಸಿದರು ಬಹಳೋಲಗದ ಸಂ
ಭ್ರಮದ ಸಿರಿ ತಲೆವಾಗುತಿರ್ದುದು ನೊಸಲ ಕೈಗಳಲಿ ।
ಕಮಲಗಣ್ಣಿನ ದೇವನೇ ಸಾ
ಕೆಮಗೆ ಮಾಡುವುದೇನೆನುತ ತ
ತ್ಕುಮತಿ ಕೌರವನಿಳಿಯದಿರ್ದನು ಸಿಂಹವಿಷ್ಟರವ ॥ ೪೦

ಸೆಣಸು ಸೇರದ ದೇವನಿದಿರಲಿ
ಮಣಿಯದಾತನ ಕಾಣುತವೆ ಧಾ
ರಿಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ ।

ಮಣಿಖಚಿತ ಕಾಂಚನದ ಪೀಠದ
ಗೊಣಸು ಮುಱಿದುದು ನಭದಿ ಸುರಸಂ |
ದಣಿಗಳಾ ಎನೆ ಕೆಡೆದು ಬಿದ್ದನು ಹರಿಯ ಚರಣದಲಿ || ೪೧

ಧರಣಿಪತಿ ಸಿಂಹಾಸನದ ಮೇ
ಲಿರದೆ ಬಹರೇ ನಾವು ಬಂದೇ
ಹರಸುವೆವು ತಪ್ಪಾವುದೆನುತೆತ್ತಿದನು ಮಸ್ತಕವ |
ಸುರನದೀಸುತ ಕೈಗೊಡಲು ಕೇ
ಸರಿಯ ಪೀಠಕೆ ದೇವ ಬಂದನು
ಕುರುಕುಲಾಗ್ರಣಿಗಳ ಸುಸನ್ಮಾನವನು ಕೈಗೊಳುತ || ೪೨

ಕುಶಲವೇ ಕುರುರಾಯ ಬಾರೈ
ಮುಸುಡ ದುಗುಡವಿದೇನು ಬಾ ಎಂ
ದಸುರರಿಪು ಕೌರವನ ಕರೆದನು ತನ್ನ ಸಮ್ಮುಖಕೆ |
ಉಸುರಲಮ್ಮೆನು ಭಾವತನದೊಂ
ದೆಸೆವ ಸಲುಗೆಗೆ ನೇಮವಾದರೆ
ಬಿಸಜಲೋಚನ ಬಿನ್ನಹವನವಧರಿಸಬೇಕೆಂದ || ೪೩

ನೀವು ಬಿಜಯಂಗೈವಿರೆಂದು ಮ
ಹಾವಿಲಾಸದೊಳಳವಡಿಸಿ ನಾ
ನಾವಿಧದ ಷಡುರಸವ ತರುಣಿಯರಿಂದ ಸವೆಸಿದೆನು |
ದೇವ ನಮ್ಮರಮನೆಗೆ ಬಾರದೆ
ನೀವು ವಿದುರನ ಮನೆಯೊಳುಂಡಿರಿ
ಗೋವಳಿಗತನ ನಿಮ್ಮ ವೈಸಿರಿ ತಪ್ಪದಾಯ್ತೆಂದ || ೪೪

ಈ ಕೃಪನ ಈ ದ್ರೋಣನೀ ಗಂ
ಗಾಕುಮಾರನ ಮನೆಯ ಹೊಗದವಿ
ವೇಕಿ ತೊತ್ತಿನ ಮಗನ ಮನೆಯಲಿ ಹಸಿವ ನೂಕಿದಿರಿ |
ಸಾಕಿದಾತನು ನಂದಗೋಪನು
ಕಾಕ ಬಳಸಲು ಸಲ್ಲದೇ ನಿಮ
ಗೇಕೆ ರಾಯರ ಠೀವಿಯೆಂದನು ನಗುತ ಕುರುರಾಯ || ೪೫

ಕುರುಪತಿಯು ಬಿಱುನುಡಿಯು ಕೇಳಿದು
ಕರಣದಲಿ ಕೋಪಾಗ್ನಿಯುಕ್ಕಲು
ಕೆರಳಿ ನಿರ್ಭೀತಿಯಲಿ ನುಡಿದನು ವಿದುರನರಸಂಗೆ ।
ದುರುಳ ನೀ ನಿಂದಿಸಿದ ನುಡಿಗು
ತ್ತರವನೀಯಲದೇಕೆ ನಿಮ್ಮಯ
ವರಜನನಿಗಾದಿಯಲಿ ಗಂಡನದಾರು ಹೇಳೆಂದ ॥ ೪೬

ಕಡುಮುಳಿದು ಕಲಿಭೀಮ ನಿನ್ನಯ
ತೊಡೆಗಳನು ಮುಱಿವಾ ಸಮಯದಲಿ
ಬಿಡದೆ ನಿನ್ನನು ಕಾಯಬೇಕೆಂದುಳುಹಿದೆನು ಧನುವ ।
ಕೆಡೆ ನುಡಿಸಿಕೊಂಡಿನ್ನು ಕಾವೆನೆ
ಪೊಡವಿಪತಿ ಕೇಳೆಂದು ವಿದುರನು
ಹಿಡಿದ ಬಿಲ್ಲನು ಮುಱಿದನಾ ಕುರುಸೇನೆ ಕಳವಳಿಸೆ ॥ ೪೭

ಧನು ಮುಱಿಯೆ ಗಾಂಧಾರಿ ಗತಲೋ
ಚನರು ಮಮ್ಮಲ ಮಱುಗಿದರು ಭೂ
ಪನ ದುಗುಡ ಮಿಗಿಲಾಯ್ತು ಭೀಷ್ಮ ದ್ರೋಣರಳಲಿದರು ।
ಮನದ ಹರುಷದಲಂದು ಮಧುಸೂ
ದನನು ವಿದುರನ ತಿಳುಹಿ ಕೇಳಿಲೆ
ಜನಪ ಕೌರವರಾಯ ನಿಮ್ಮಯ ಶೀಲ ಬೇಱೆಂದ ॥ ೪೮

ಹಗೆಯನುಣಿಸುವುದಾಗದ್ವೈ ವೈ
ರಿಗಳ ಮನೆಯೊಳಗನ್ನ ಪಾನಾ
ದಿಗಳ ಕೊಳಲಾಗದು ನಿದಾನಿಸೆ ರಾಜನೀತಿಯಿದು ।
ಬಗೆಯೆ ನೀ ಪಾಂಡವರಿಗಹಿತನು
ವಿಗಡ ಪಾಂಡವರೆನ್ನ ಜೀವನ
ಹಗೆಯ ನಂಬುವೆನೆಂತು ಹೇಳೈ ಕೌರವರ ರಾಯ ॥ ೪೯

ಸೇರುವನು ಸಕಳಂಕಚಂದ್ರನು
ವಾರಿಧಿಗೆ ನೀನಖಿಳಗೋಪೀ
ಜಾರ ಜಾರೆಯ ಮಕ್ಕಳಿಗೆ ನೀ ಜೀವ ತಪ್ಪೇನು ।

ಆರು ತಮ್ಮಂದದ ಮಹಾತ್ಮರ
ಸೇರುವರಲ್ಲೈ ಪಾಂಡುಪುತ್ರರ
ಕೂರುಮೆಗೆ ನಾನಂಜೆ ನೀ ಬಂದನುವ ಹೇಳೆಂದ ॥ ೫೦

ಕುಲದವನ ಹೃದಯಾಂಧಕಾರವ
ಕಳಚಲೆಂದು ಹಿಮಾಂಶು ಹರಹಿದ
ನೆಳೆಯ ಬೆಳುದಿಂಗಳನೆನಲು ಸುರರಿಪುಕುಲಾಂತಕನು ।
ತೊಳಪ ದಶನಮಯೂಖತತಿ ಹೊಳೆ
ಹೊಳೆಯೆ ನುಡಿದನು ತತ್ಸಭಾ ಮಂ
ಡಲ ಮಹಾಂಬುಧಿ ನುಡಿದರೆಯು ತನಿಗಡಣವಡಗಿರಲು ॥ ೫೧

## ೭. ಕೇಡಿಗಗರ ಮಾತಿಂಗೊಡಬಡದಿರು

ಅವಧಿ ಸವೆದುದು ಪಾಂಡವರು ನಿ
ನ್ನವರು ವನವಾಸ ಪ್ರಯಾಸದಿ
ನವೆದರವರನು ಕೂಡಿ ಬದುಕುವುದಧಿಕಗುಣ ನಿನಗೆ ।
ಅವನಿಯರ್ಧವನೀವುದೀ ಯು
ಧ್ರುವದ ಬಾಳಿಕೆಯೊಳಗೆ ಪುರುಷಾ
ರ್ಥವನು ಸಂಚಿಸೆ ಕಲಿಯುಬೇಹುದು ನೃಪತಿ ಕೇಳೆಂದ ॥ ೧

ಕೋಶ ಬಲ ತಳತಂತ್ರ ಹೆಚ್ಚಿದ
ದೇಶ ದುರ್ಗವಮಾತ್ಯ ಮಿತ್ರ ಮ
ಹೀಶಜನವೆಂಬಿದುವೆ ಕೇಳ್ ಸಪ್ತಾಂಗ ಸನ್ನಾಹ ।
ಈಸು ನಿನಗುಂಟಿಲ್ಲ ಮಿತ್ರಮ
ಹೀಶರೆಂಬುದು ಕೊಱತೆ ಪಾಂಡವ
ರಾ ಸಹಾಯವು ಬರಲು ಬಳಿಕಿದಿರಿಲ್ಲ ನಿನಗೆಂದ ॥ ೨

ಸಾಮವೆಂಬುದು ರಾಜನೀತಿಗೆ
ತಾ ಮನೋಹರರೂಪು ಬದುಕುವ
ಭೂಮಿಪಾಲರ ವಿನುತ ವಿಭವಕೆ ಮೂಲಬೀಜವಿದು ।
ಸಾಮತಪ್ಪಿದ ಬಳಿಕ ನೀತಿ ವಿ
ರಾಮವಾಗದೆ ಬಿಡದು ದಂಡದ
ಸೀಮೆಯೆಂಬುದುಪಾಯದಲಿ ಸಾಮಾನ್ಯತರವೆಂದ ॥ ೩

ಮಾಡಿದಪಕಾರಂಗಳನು ಮಱೆ
ದಾಡರವರತಿಮೋಹದಲಿ ನೀ
ಗೂಡಿ ಬದುಕುವ ನುಡಿಯ ನುಡಿವರು ನಮ್ಮ ಮನ ಮೆಚ್ಚೆ ।
ಕಾಡಿನೊಳಗಾಡಿದರು ದುಃಖವ
ತೋಡಿದರು ನೀನವರಿಗುಚಿತವ
ಮಾಡಿ ನಾಡನು ಕೊಡುವುದೆಂದನು ದಾನವಧ್ವಂಸಿ ॥ ೪

ಬೆರಳ ಮೀಸೆಯುಲಿಡುತ ಕಿಱುನಗೆ
ವೆರಸಿ ಕರ್ಣಾದಿಗಳ ವದನವ
ತಿರುಗಿ ನೋಡುತ ಹರಿಯ ನುಡಿಗಳ ಕಿವುಡುಗೇಳುತ್ತ ।

ಮರುಳುತನದಾಳಾಪವೇತಕೆ
ಮುರಮಥನ ಪಾಂಡವರ ಕಥನವ
ನೊರೆಯದಿರು ಕರ್ಣಕ್ಕೆ ಶೂಲವಿದೆಂದನಾ ಭೂಪ ॥ ೫

ಮಾವ ಮೊದಲು ಸಹಾಯ ಮಧ್ಯದ
ಲಾ ವಿರಾಟನ ಸಖ್ಯ ಕಡೆಯಲಿ
ನೀವು ಮಮ ಜೀವಾಹಿ ಎಂಬಿರಿ ನಿಮ್ಮ ಪಾಂಡವರ ।
ನಾವು ಕಡೆಯಲಿ ಹೊಱಗು ನಮಗಿ
ನ್ನಾವ ಭೂಪರ ಸಖ್ಯವಿದ್ದುದು
ದೇವ ನಾಚಿಸಬೇಡ ಸಂಧಿಯ ಮಾತ ಮಱೆಯೆಂದ ॥ ೬

ಮಾಡು ಸಂಧಿಯ ನಮ್ಮ ವಚನವ
ಕೋಡದಿರು ಸವಿವಾತುಗಳ ನಿನ
ಗಾಡುವವರಿಗೆ ಚಿತ್ತಗೊಡದಿರು ಹಿಸುಣ ಹೊಗಿಸದಿರು ।
ನಾಡನಾಲಗೆ ಗೆಳೆಯರೆಂದುದ
ಮಾಡದಿರು ಪಾಂಡವ್ವನೃಪಾಲರ
ಕೂಡಿ ಬಾಳ್ವುದು ಪಥ್ಯ ನಿನಗೆಂದಸುರರಿಪು ನುಡಿದ ॥ ೭

ಅವರಿಗಿಂದ್ರಪ್ರಸ್ಥದಲಿ ರಾ
ಜ್ಯವನು ಕುಳಸಹಿತಿತ್ತು ನೀ ಪಾಂ
ಡವಪ್ರತಿಷ್ಠಾಚಾರ್ಯನೆಂಬೀ ಬಿರುದ ಧರಿಸಿದರೆ ।
ಅವನಿಯಲಿ ನಿನ್ನೊಡನೆ ತಲೆದೋ
ಱುವ ನೃಪಾಲಕರಿಲ್ಲ ನುಡಿಗಳು
ಕಿವಿಗೆ ಕರ್ಕಶವೀಗಳಾದರೆ ತುದಿಗೆ ಲೇಸೆಂದ ॥ ೮

ನೀತಿಗಾಲಯ ನಿಮ್ಮ ಸಿರಿ ವಿ
ಖ್ಯಾತಿಗಿದು ನೆಲೆ ಸಕಲ ಸೌಖ್ಯ
ವ್ರಾತಕಿದು ಸದ್ಬೀಜವೆನಿಸಿತು ಕೌರವಾನ್ವಯವು ।
ಭೂತಳದ ಲೋಲುಪತೆಯಲಿ ಕುಲ
ಘಾತುಕರು ತಾವೆಂಬ ಕೀರ್ತಿಗೆ
ಯೋತು ನೀ ನೆಲೆಯಾಗದಿರು ಕೇಳೆಂದನಸುರಾರಿ ॥ ೯

ಧರೆಯ ನೃಪರಿಗೆ ಹಸ್ತಿನಾಪುರ
ದರಮನೆಯ ಬಾಗಿಲಲಿ ಸಮಯವು
ದೊರಕಲಂತದು ಪುಣ್ಯವೆಂಬೀ ಸಾರ್ವಭೌಮತೆಯ ।
ಸಿರಿಗೆ ಪಾಂಡವರನ್ಯರಾದರೆ
ಮೆಱೆಯಬಲ್ಲುದೆ ನಿನ್ನ ಸಿರಿ ಕಾ
ತರಿಗತನವನು ಮಾಣು ಕೇಳೆಂದಸುರರಿಪು ನುಡಿದ ॥ ೧೦

ಯಮಜ ನಿನಗೊಳ್ಳಿದನು ಪಾರ್ಥನ
ಮಮತೆ ನಿನ್ನಲಿ ಹಿರಿದು ಭೀಮನ
ತಮದ ನುಡಿ ಹಿಂಗಿದುದು ನಕುಲನು ನಿನ್ನೊಳಿರಡಱಿಯ ।
ತಮತಮಗೆ ತಮ್ಮೈವರುಱೆ ನಿ
ನ್ನಮಲ ವಚನವ ಹಾರುತಿಹರಾ
ಭ್ರಮಿತನವ ಮಾಡದಿರು ನೀ ಸೋದರರ ಸಲಹೆಂದ ॥ ೧೧

ಧರ್ಮಜನ ಕಡುಮೋಹವೆಂಬುದು
ನಿಮ್ಮ ಚರಣದೊಳಿರಲಿ ಭೀಮನ
ಹಮ್ಮು ತಮ್ಮೊಳಗಿರಲಿ ಫಲುಗುಣನೊಲುಮೆಯಂತಿರಲಿ ।
ಎಮ್ಮ ಭೂಮಿಯೊಳರೆಯ ಬೇಡುವ
ರೆಮ್ಮ ಬಂಧುಗಳಲ್ಲ ಸಂಧಿಗೆ
ತಮ್ಮನೊಡಬಡನೆಂದು ದುಶ್ಶಾಸನನ ನೋಡಿದನು ॥ ೧೨

ಬಂಧುಕೃತ್ಯದ ಮಾತು ಸೂರ್ಯಂ
ಗಂಧಕಾರವು ಸೇರುವುದೆ ನಿ
ರ್ಬಂಧದಲಿ ನಿವೇಕೆ ನುಡಿವಿರಿ ರಾಜಕಾರಿಯವ ।
ಸಂಧಿಯಾಗದು ಪಾಂಡವರ ಸಂ
ಬಂಧ ನಮಗೇಕೆಂದು ಕರುಣಾ
ಸಿಂಧುವಿನ ಮೊಗನೋಡಿ ದುಶ್ಶಾಸನನು ಗರ್ಜಿಸಿದ ॥ ೧೩

ಈ ಹರಿಯ ನುಡಿಗೇಳು ದೈವದ
ಮೋಹ ತಪ್ಪಿದ ಬಳಿಕ ಸುಭಟರ
ಸಾಹಸದೆ ಹುರುಳಿಲ್ಲ ನಂಬದಿರೆಮ್ಮ ಬಲುಹುಗಳ ।

ಐಹಿಕವನೀಡಾಡದಿರು ವೈ
ದೇಹಿಯನು ಸೆಱೆಗೆಯ್ದ ಸ್ವಾಮಿ
ದ್ರೋಹಿಯನು ಹೋಲದಿರು ಕೌರವ ಎಂದನಾ ಭೀಷ್ಮ || ೧೪

ನೆಲನ ಬೇಡುವ ಪಾಂಡವರ ಭುಜ
ಬಲದೊಳಗೆ ಕುಂದಿಲ್ಲ ನೀತಿಯ
ತಿಳುಹಲೈತಂದಸುರರಿಪು ಸಾಮಾನ್ಯಬಲನಲ್ಲ |
ಇಳೆಯೊಳರ್ಥವನೊಪ್ಪುಗೊಡು ಯುದ್ದು
ಕುಲಲಲಾಮನ ನೇಮವನು ನೀ
ಸಲಿಸು ಕೆಡಿಸದಿರೀ ವಿಲಾಸವನೆಂದನಾ ದ್ರೋಣ || ೧೫

ಹಲವು ಹೊಲ್ಲೆಹಗಳನು ಪಾಂಡವ
ರೊಳಗೆ ನೆನೆದೆನು ಮುಚ್ಚುಮಱೆಯೇ
ಕಿಳಿಯ ಲೋಭದಲವರ ಕೆಡಿಸುವ ಹದನ ನೆಗಳಿದೆನು |
ನೆಲನ ಕೊಂಡೆನು ಜೂಜುಗಾಱಿರ
ವಿಲಗದಲಿ ಪಾಂಡವರ್ಗೆ ಪುನರಪಿ
ಹಳುವವೇ ಶರಣಲ್ಲದುಂಟೇ ಕೃಷ್ಣ ಕೇಳೆಂದ || ೧೬

ತಾಗುವಪಕೀರಿತಿಗೆ ಹೇಸುವ
ರಾಗಿ ಸತ್ಯವ ಕಾದು ಹಳುವವ
ಭೋಗಿಸಿದಡದು ಕುಲಕೆ ಕುಂದೇ ಪಾಂಡುತನಯರಿಗೆ |
ನೀಗಿದರು ವನವಾಸವನು ಸರಿ
ಭಾಗದವನಿಯು ಕೊಂಬ ಚಲವನು
ಹೋಗಬಿಡುವನೆ ಭೀಮುಯೆಂದನು ನಗುತ ಮುರವೈರಿ ||೧೭

ಕೊಡು ಕುಶಸ್ಥಳವನು ವೃಕಸ್ಥಳ
ಪುರವ ವಾಸಂತಿಯನು ಕುಳವನು
ಕೊಡಿಸಿ ಕಳೆ ಸಿರಿಕರಣದವರಲಿ ವಾರಣಾವತವ |
ಕೊಡು ನಿನಗೆ ಮನ ಬಂದುದೊಂದನು
ನಡಸಿ ಕೊಡುವೆನು ಪಾಂಡವರಲವ
ಗಡೆಯುತನವಂತಿರಲಿ ನೃಪ ಕೇಳೆಂದನಸುರಾರಿ || ೧೮

ಬೇಡಿದೊಂದೊಂದೂರು ನಮ್ಮಯ
ನಾಡ ತಲೆಮಂಡೆಗಳು ರಾಜ್ಯದ
ರೂಢಿಯೈದೂರುಗಳ ಬೆಳವಿಗೆ ಹಸ್ತಿನಾನಗರ ।
ಬೇಡಲಱಿವನು ಮಾನ ನಿನಗುಂ
ಟಾಡಲೇತಕೆ ನೆಲನನೀರಡಿ
ಮಾಡಿಕೊಂಡ ಮಹಾತ್ಮ ನಿನಗಾನಂಜಿದಪೆನೆಂದ ॥ ೧೯

ಕರೆದು ಮೂಱಡಿ ನೆಲನ ಧಾರೆಯ
ನೆಱೆದ ಬಲಿ ತಳಕಿಳಿದನೆನ್ನೀ
ಧರೆಯಲೈದೂರುಗಳನಿತ್ತೆನಗಾವ ವಿಧಿಯಹುದೋ ।
ಪರಮ ಪುರುಷನು ನೀನು ನಿನಗಾಂ
ಶರಣುವೊಕ್ಕೆನು ಬಂದ ಪಥದಲಿ
ಮರಳಿ ಬಿಜಯಂಗೈವುದೆಂದನು ನಗುತ ಕುರುರಾಯ ॥ ೨೦

ಸಲಲಿ ನೀ ಪಾಂಡವರೊಳೆತ್ತಿದ
ಚಲದ ಬಳವಿಗೆಯಕಟ ನಿನ್ನೀ
ಬಳಗ ಬದುಕಲಿ ಮತ್ತೆ ನವೆಯಲಿ ಪಾಂಡುನಂದನರು ॥
ಜಲಧಿ ಮೇರೆಯ ಮಹಿಯಲೊಂದೇ
ಸ್ಥಳವನೈವರಿಗೀವುದೆನೆ ಕಳ
ವಳಿಗನವಗಡಿಸಿದನು ಜಱೆದನು ಜಗದ ಪಾಲಕನ ॥ ೨೧

ನೆಲದೊಳರ್ಧವನೀವುದಿಲ್ಲಾ
ಸ್ಥಳವನೈದನು ಮುನ್ನ ಕೊಡೆನೆ
ನ್ನಿಳೆಯ ಭಾಗವನೀಸ ಕೊಟ್ಟಡೆ ನಿನ್ನ ಮೇಲಾಣೆ ।
ನೆಲನ ಕಡೆಯಲಿ ಮುಳ್ಳ ಮೊನೆಯು
ಚ್ಚಳಿಪ ಧರಣಿಯನಿತ್ತೆನಾದರೆ
ಬಳಿಕ ನೀ ನಗು ಹೋಗು ಕದನವ ಕೊಂಡು ಬಾ ಎಂದ॥ ೨೨

ದನವ ಕಾವುದು ತೀರಿತೇ ಬನ
ಬನದ ತೊಳಲಿಕೆ ಕಡೆಯನೈದಿತೆ
ಮುನಿವರರ ಬೋಳೆಗಳನೆಱಗಿಸಿಕೊಂಬುದನೆ ಬಿಸುಟು ।

ಸಜ್ಜನ

ವನನಿಧಿಯನೆಡೆಗೊಂಡು ನಡು ಹಾ
ವಿನಲಿ ಹಕ್ಕೆಯಲುಡುಗಿ ನಮ್ಮೊಳು
ಮನಕತವ ನೀ ತಿದ್ದಲೋಸುಗ ಬಂದೆ ಹೋಗೆಂದ ॥ ೨೩

ಹಗೆಯ ಸಂಧಿಯ ನೆವದೊಳೆಮ್ಮಯ
ಬಗೆಯನಱಿಯಲು ಬಂದೆ ಯಾದವ
ರಗಡುತನ ನಮ್ಮಲ್ಲಿ ಸಲ್ಲದು ಸಾಕು ನುಡಿಯದಿರು ।
ಹಗೆಯನಾದಡೆ ಕೊಂಡು ಬಾ ನಡೆ
ಮಗುಳ್ದೊಡಱಿಯಲುಬಹುದು ನೀ ಹರಿ
ಹುಗಿಲು ಮಾಡುವ ಮಂತ್ರ ಸಾಕಿನ್ನೆಂದನವನೀಶ ॥ ೨೪

ಖತಿವಿಡಿದು ಮನದೊಳಗೆ ಮಣಿಯದ
ಮತಗುಡದ ಫಣಿಕೇತನನ ಕಂ
ಡ್ಹತುಳಬಲ ಗುರು ಸಿಂಧುತನಯಾದಿಗಳ ಮೊಗನೋಡಿ ।
ವೆತಿತರವನಿಯ ಬಯಸಿ ಕದನವ
ನ್ನತಿಮಥನದಲಿ ಬಗೆದಡೀತನ
ಸತಿಯ ಕಿವಿಯೋಲೆಗಳು ತಿರವಲ್ಲೆಂದನಸುರಾರಿ ॥ ೨೫

ತುಱುಗಿ ಕಬ್ಬಕ್ಕಿಗಳು ಗೂಡಿನೊ
ಳೆಱಗುವಂತಿರೆ ಪಾರ್ಥನಂಬುಗ
ಳುಱುಬಿ ನಿನ್ನಯ ದೇಹದೊಳು ಮುಱಿವಾಗ ಸೈರಿಸದೆ ।
ಒಱಲಿ ನೀ ಕೆಡೆವಾಗ ಸಂಧಿಯ
ಮುಱಿದ ವಿಧಿಯನು ಬಳಿಕ ಬೈದರೆ
ಬಱಿದೆ ತೀರುವುದಿಲ್ಲ ಖಳ ಕೇಳೆಂದನಸುರಾರಿ ॥ ೨೬

ಕಿವಿಗೆ ಕಠಿಣವು ನಮ್ಮ ನುಡಿಯೆಂ
ದವನಿಪತಿ ಮುಖದಿರುಹದಿರು ರೌ
ರವದ ಸಂಗ್ರಾಮದಲಿ ಕಡುಗಿದ ಪವನನಂದನನ ।
ಶಿವಿದ ಕಿವಿಗಳ ಗದೆಯ ಹೊಯ್ಲಿನ
ಕವಳವನು ದಿಟವೆಂತು ಸೈರಿಸ
ದವಮತಿಗೆ ನೀ ಗಂಡನಹೆ ಮರುಳರಸ ಕೇಳೆಂದ ॥ ೨೭

ಲೀಲೆಯಲಿ ನೀನಖಿಳಭೂಪರ
ನೋಲಗಿಸಿಕೊಳಲಲಸಿ ಕಾಲನ
ಕಾಲ ಕೆಳಗೋಲೈಸಿದರೆ ಕುಂದಲ್ಲವೇ ನಿನಗೆ ।
ಸೋಲ ತಪ್ಪದು ಭೀಮ ಪಾರ್ಥರ
ಕ್ಕೋಲು ಕೊಂಕುವುವಲ್ಲ ಧರಣಿಯ
ಲ್ಲೋಲುಪತೆಯಿಂದಳಿಯಬೇಡೆಂದಸುರರಿಪು ನುಡಿದ ॥ ೨೮

ಕಡೆಗೆ ಧೃತರಾಷ್ಟ್ರಾವನೀಶನು
ಮಡದಿಸಹಿತಲನಾಥನಾಗಿಯೆ
ಕೆಡುವನೆಂಬುದ ಬಲ್ಲೆನಾ ಪಾಂಡವರ ಬಾಗಿಲಲಿ ।
ಪಡಿಗೆ ಪವಮಾನಜನ ಸಮಯವ
ಪಡೆಯದಿಹ ತಜುವಾಯ ನಮಗದು
ನಡಸಿಕೊಡುವುದು ತಪ್ಪದಕಟಕಟೆಂದನಸುರಾರಿ ॥ ೨೯

ಮನದ ಸಂಕೇತದಲಿ ದುರ್ಯೋ
ಧನನ ಕಟ್ಟೆಲು ವಿದುರ ಗಂಗಾ
ತನಯ ಧೃತರಾಷ್ಟ್ರಾವನಿಪರಾಲೋಚಿಸಿದ ಹದನ ।
ಮನದಲಱಿದನು ಬಳಿಕ ದುಶ್ಶಾ
ಸನನು ದುರ್ಯೋಧನಗೆ ಇನಿಬರ
ನೆನಹ ಬಿನ್ನಹ ಮಾಡಿದನು ಖಾತಿಯಲಿ ಕಳವಳಿಸೆ ॥ ೩೦

ಹೆತ್ತವರು ಮರುಳಹರೆ ನಾವಿ
ನ್ನೆತ್ತ ಸಾರುವೆವಣ್ಣದೇವರೆ
ಚಿತ್ತವಿಸಿಧರೆ ರಾಜಕಾರ್ಯದ ಹದ ವಿಸಂಚಿಸಿತು ।
ಮುತ್ತಯನ ಕಿರಿಯಯ್ಯನಯ್ಯನ
ಚಿತ್ತ ಕೊಂಕಿತು ಸಾಕು ನಿಂದಿರೆ
ನುತ್ತಲಗ್ರಜಸಹಿತ ಓಲಗದಿಂದ ಹೊಱವಂಟ ॥ ೩೧

ಮುನಿದು ದುರ್ಯೋಧನನು ದುಶ್ಶಾ
ಸನನು ಕೆಲದರಮನೆಯೊಳಾಲೋ
ಚನೆಯ ಮಾಡಿದರಂದು ಸೌಬಲ ಕರ್ಣರೊಡಗೂಡಿ ।

ದನುಜವೈರಿ ಕುಮಂತ್ರದಲಿ ಬೊ
ಪ್ಪನಲಿ ಖಾತಿಯನಿಕ್ಕಿದನು ಕೈ
ಮನದ ಕಲಿಗಳು ಕಟ್ಟೆ ಕೃಷ್ಣನನೆಂದನಾ ಭೂಪ ॥ ೩೨

ಎರಡು ಬಲವನು ಮಸೆದು ಕೊಲಿಸುವ
ಭರವು ಯಾದವನದು ನಿದಾನಿಸ
ಲರಿ ನಮಗೆ ಮುರವೈರಿಯಲ್ಲದೆ ಪಾಂಡುನಂದನರೆ ।
ತರಿಸಿ ಹುರಿ ನೇಣುಗಳಲೀತನ
ಕರವೆರಡನೊಡೆಬಿಗಿದಡವದಿರು
ಕೆರಳಿ ಮಾಡುವದಾವುದೆಂದನು ಕೌರವರ ರಾಯ ॥ ೩೩

ಗಾಳಿಯುಪಶಮಿಸಿದರೆ ವಹ್ನಿ ಬೆಸ್ತಿ ಚಿಸಿ
ಜ್ವಾಲೆ ತಾನೇ ನಿಲುವುದೀತನ
ತೋಳ ಬಿಗಿದಡೆ ಬಳಿಕ ಮನಗುಂದುವರು ಪಾಂಡವರು ।
ಮೇಳವಿಸಿ ನೇಣುಗಳನೆನುತ ನೃ
ಪಾಲಕನು ಕಳವಳಿಸಿ ನುಡಿವುದ
ನಾಲಿಸುತ ಸಾತ್ಯಕಿ ಕರೆದು ಕೃತವರ್ಮಗಿಂತೆಂದ ॥ ೩೪

ಆಳು ಕುದುರೆಯ ಬಾಗಿಲಿಗೆ ಬರ
ಹೇಳು ಕೈದುವ ಕೊಂಡು ವೀರಭ
ಟಾಳಿ ಹತ್ತಿರ ನಿಲಲಿ ಕೈವೀಸಿದಡೆ ಕವಿಕವಿದು ।
ಬೀಳ ಹೊಯ್ವುದು ಹೊಕ್ಕು ಗಂಡಿನ
ಮೇಲೆ ಗಂಡನು ಕಡಿದು ಕುರುಭೂ
ಪಾಲಕನ ನೊರೆನೆತ್ತರಲಿ ನಾದುವುದು ಮೇದಿನಿಯ ॥ ೩೫

ಎಂದು ಸುಭಟರಿಗರುಹಿ ಸಾತ್ಯಕಿ
ಬಂದು ಕೃಷ್ಣನ ಕಿವಿಯ ಹತ್ತಿರ
ನಿಂದು ವದನವ ಚಾಚಿ ಬಿನ್ನಹ ಮಾಡಿದನು ಹದನ
ಮಂದಮತಿಗಳು ತಪ್ಪಿದರು ಮನ
ಸ್ಸಿಂದಲಾಗದು ದೇವ ಚಿತ್ತೈ
ಸೆಂದಡಸುರಾರಾತಿ ನಗುತಾ ಭೀಷ್ಮಗಿಂತೆಂದ ॥

ಪರಿಣತಪ್ರೌಢಿಗಳಿಗಂತಃ
ಕರಣ ನೆನೆವುದು ಸುಜನರಿಗೆ ನಿ
ಷ್ಠುರತೆಗಲ್ಲದೆ ಮನವನೀಯರು ಮಹಿಯ ಮೂಢಜನ ।
ಕರಗುವುದು ಶಶಿಕಾಂತ ಚಂದ್ರನ
ಕಿರಣ ತಾಗಲು ವಜ್ರಹತಿಯನು
ಧರಿಸಿದಲ್ಲದೆ ಗಿರಿಗಳಳುಕವು ಭೀಷ್ಮ ಕೇಳೆಂದ ॥ ೩೭

ದೂತರನು ಕಟ್ಟುವುದು ರಾಯರಿ
ಗೇತಱುಚಿತವು ನಮ್ಮ ಬಿಗಿಯಲು
ಕಾತರಿಸುತಿದೆ ನಿನ್ನ ಮೊಮ್ಮಂದಿರನು ನೀ ಕರಸಿ ।
ಮಾತನಾಡಿಸಿ ನೋಡು ನಮಗಾ
ಭೀತಿ ತಾನಿಲ್ಲೆನಲು ಗಂಗಾ
ಜಾತ ಧೃತರಾಷ್ಟ್ರಂಗೆ ನುಡಿದನು ಕೌರವನ ಹದನ ॥ ೩೮

ಅವನಿಪತಿ ಕೇಳಿದನು ಕನಲಿದು
ಶಿವಶಿವೆಂದನು ವಿದುರ ಕರೆ ಕೌ
ರವನು ಮಗನೇ ಮೃತ್ಯುವಲ್ಲಾ ಭರತಸಂತತಿಗೆ ।
ಆವಳ ಬರಹೇಳಿತ್ತ ಮಗನಾ
ಟವನು ನೋಡಲಿ ಹೆತ್ತ ಮೋಹದ
ಹವಣುಗಳ ಬೆಸಗೊಂಬ ಗಾಂಧಾರಿಯನು ಕರೆಯೆಂದ ॥ ೩೯

ಜನಪನಾಜ್ಞೆಯ ಮೇಲೆ ದುರ್ಯೋ
ಧನನ ತಂದರು ಸಭೆಗೆ ಬಳಿಕಾ
ವನಜಮುಖಿಗೀ ಹದನನಱುಹಿದರಾಗಳೈತಂದು ।
ದನುಜರಿಪುವನು ಕಟ್ಟುವೈ ಕೃ
ಷ್ಣನನು ಬಿಗಿವೈ ದಿಟ ಮಗನೆ ಹೆ
ತ್ತೆನಗೆ ಹರುಷವ ತಂದೆಯೆಂದಳು ಮುಳಿದು ಗಾಂಧಾರಿ ॥ ೪೦

ನೆಟ್ಟನೆಲೆ ಧೃತರಾಷ್ಟ್ರನೃಪ ನೀ
ನಿಟ್ಟ ಕಿಚ್ಚಿದು ಪಾಪಿ ಮಗನನು
ಹುಟ್ಟಿದಾಗಳೆ ಬಿಸುಡಹೇಳರೆ ಬಾಳುಗೆಡೆದವನ ।

ಕಟ್ಟುವನು ಗಡ ಕೃಷ್ಣನನು ಕೈ
ಮುಟ್ಟುವನು ಗಡ ಗಗನವನು ಬಲು
ದಿಟ್ಟತನಕಿನ್ನೇನನೆಂದಪೆಯೆಂದಳಿಂದುಮುಖಿ ॥ ೪೧

ಮರುಳು ಮಗನೇ ಕೃಷ್ಣರಾಯನ
ಕೆರಳಿಚುವರೇ ಯಾದವರು ನಮ
ಗೆರವಿಗರೆ ವಸುದೇವಗೆಮ್ಮಲಿ ಭೇದವೇ ನಿನಗೆ ।
ತರಳತನವಿದು ಬೇಡ ಖುಲ್ಲರ
ನೆರವಿಯೊಡನಾಡಿದರೆ ತಪ್ಪದು
ನರಕವೆಂದನು ಕುರುಪತಿಗೆ ಧೃತರಾಷ್ಟ್ರ ಭೂಪಾಲ ॥ ೪೨

ನೊರಜು ಹೊಕ್ಕಡೆ ಕದಡುವುದೆ ಸಾ
ಗರದ ಜಲ ನೊಣವೆಱಗಿದರೆ ಕುಲ
ಗಿರಿಗಳಲ್ಲಾಡುವವೆ ಕೇಳ್ ಧೃತರಾಷ್ಟ್ರಭೂಪಾಲ ।
ತೆರಳಲಱಿವನೆ ಕೊಬ್ಬಿದೊಳ್ಳೆಯು
ಮುಱಿಗೆ ಗರುಡನು ನಿನ್ನ ಮಕ್ಕಳ
ದುರುಳತನಕಂಜುವನೆ ಮುರರಿಪುಯೆಂದನಾ ವಿದುರ ॥ ೪೩

ವಿದುರನಿಂತೆಂದೆನಲು ಮಿಂಚಿನ
ಹೊದಱು ಹುರಿಗೊಂಡಂತೆ ರವಿಶತ
ವುದುರಿದವು ವ್ಯೋಮುರಿದು ನಿಂದಡೆ ದೇವನಂಗದಲ ।
ಸದೆದುದಾಸ್ಥಾನವನು ಘನ ತೇ
ಜದಲಿ ಹರಿ ತಾ ಲೀಲೆ ಮಿಗೆ ತೋ
ಱಿದನು ನಿರುಪಮ ವಿಶ್ವರೂಪವನಾ ಮಹಾ ಸಭೆಗೆ ॥ ೪೪

ಚರಣದುಂಗುಟದಲ್ಲಿ ದೇವರು
ತುಱುಗಿದರು, ನೊಸಲಿನಲಿ ಕಮಲಜ,
ನುರದಲಗ್ಗದ ರುದ್ರನಾಸ್ಯದೊಳಗ್ನಿವಾಯುಗಳು, ।
ಬೆರಳಲಿಂದ್ರಾದಿಗಳು, ನಯನಾಂ
ಬುರುಹದಲಿ ರವಿ, ನಾಭಿಯಲಿ ನಭ,
ವರಭುಜಾಗ್ರದಲಖಿಳ ದಿಗುಪಾಲಕರು ರಂಜಿಸಿತು, ॥ ೪೫

ಬಲದ ಭುಜದಲಿ ಪಾರ್ಥನೆಡದಲಿ
ಹಲಧರನು, ಚರಣದಲ್ಲಿ ಧರ್ಮಜ
ಕಲಿ ವೃಕೋದರ ನಕುಲ ಸಹದೇವಾದಿ ಯಾದವರು ।
ಲಲಿತಕಾಂತಿಯೊಳಖಿಳ ತಾರಾ
ವಳಿಗಳಮಲಗ್ರಹವಿರಲು ತೊಳ
ತೊಳಗಿ ಮೆಱೆದನು ವಿಶ್ವರೂಪ ವಿಹಾರಿ ಮುರವೈರಿ ॥ ೪೭

ಅರಲ ಮಳೆ ಸೂಸಿದವು ದುಂದುಭಿ ದೇವವಾದ್ಯ
ಮೊರೆದುದಾಕಾಶದಲಿ ಮುದದಲಿ
ಧರಣಿ ಬಿದುರಿತು ತನುವ ನೂಕಿತು ಜಲಧಿ ದೆಸೆದೆಸೆಗೆ ।
ಕರಿಕಮಠರುಬ್ಬಾಳುತನ ಮಿ
ಕ್ಕಿರೆ ಮಹಾದ್ಭುತವಾಯ್ತು ಕಂಡುದು
ಹರಿಯ ರೂಪವನೊಬ್ಬ ಕೌರವನಲ್ಲದುಳಿದವರು ॥ ೪೭

ಒಳಗೆ ಹೊಳೆದನು, ಬಾಹ್ಯದಲಿ ಪ್ರ
ಜ್ವಲಿಸಿದನು, ತಾನಲ್ಲದನ್ಯರ
ಬಳಕೆ ಬೇಱೊಂದಿಲ್ಲದಂತಿರೆ ಕೂಡೆ ತೋಱಿದನು ।
ಒಳಗೆ ಬಿಗಿವೆವೊ, ಹೊಱಗೆ ಕೃಷ್ಣನ
ಸಿಲುಕಿಸುವೆವೊ, ತಿಳಿಯೆ ಕೃಷ್ಣರು
ಹಲಬರಾಗಿಹರಾರ ಕಟ್ಟುವೆವೆಂದರಾ ಖಳರು ॥ ೪೮

ಕಂಗಳನು ಕರುಣಿಸಿದನಂಧನೃ
ಪಂಗೆ ಬಳಿಕೀ ಕೃಷ್ಣರಾಯನ
ಮಂಗಳ ಶ್ರೀಮೂರ್ತಿಯನು ಮನದಣಿಯೆ ನೋಡಿದನು ।
ಕಂಗಳಡಗಲಿ ದೇವ ನಿಮ್ಮಾ
ಯಂಗವಟ್ಟವ ಕಂಡು ಮಗುಳೀ
ಕಂಗಳಿತರವ ಕಾಣಲಾಗದು ಕೃಪೆಯ ಮಾಡೆಂದ ॥ ೪೯

ಅಮಿತಕರುಣಾಸಿಂಧು ನೀನನು
ಪಮಚರಿತ್ರನು ನಿಮ್ಮಡಿಯ ಪದ
ಕಮಲ ದರುಶನದಿಂದ ಹಿಂಗಿದವಘದ ರಾಶಿಗಳು ।

ಸಮತೆಯಲಿ ನೀ ನೋಡು ಶರಣರ
ಮಮತೆ ಬೇಹುದು ಜೀಯ ಲಕ್ಷ್ಮೀ
ರಮಣ ಕೃಪೆಮಾಡೆಂದು ಮೈಯಿಕ್ಕಿದಳು ಗಾಂಧಾರಿ || ೫೦

ತಾತ ಬೆದಱಿದಿರೀ ಮುಕುಂದನ
ಕೈತವಕೆ ಬೆಚ್ಚದಿರು ಸಂಧಿಯ
ಮಾತು ತಾ ನಿಚ್ಚಯವೆ ನೀವ್ ಬೆಸಗೊಳ್ಳಿ ಮುರಹರನ |
ಈತನಂತರ್ಯಾಮಿ ಜೀವ
ವ್ರಾತದಲಿ ಜನಜನಿತ ಜಗವೆ
ಲ್ಲೀತನಾಜ್ಞೆಯೊಳಲೆವುದೆಂದನು ಕೌರವರ ರಾಯ || ೫೧

ಎನ್ನ ಹೃದಯದಲಿರ್ದು ಮುಱಿವನು
ಗನ್ನದಲಿ ಸಂಧಿಯನು, ರಿಪುಗಳ
ಲಿನ್ನು ನಿನ್ನೊಳಗಿವರೊಳಿದ್ದಾ ಹದನ ತಾನಱಿಪಿ |
ಭಿನ್ನನಂತಿರೆ ತೋಱಿ ಭಿನ್ನಾ
ಭಿನ್ನನೆನಿಸಿಯೆ ಮೆಱೆವ ತಿಳಿಯಲ
ಭಿನ್ನನೀ ಮುರವೈರಿ ನಾವಿನ್ನಂಜಲೇಕೆಂದ || ೫೨

ನಾವು ಸಂಧಿಯನೊಲಿವೆವೆಮ್ಮಯ
ಭಾವದಲಿ ಹುಳುಕಿಲ್ಲ ಸಂಪ್ರತಿ
ದೇವನಭಿಮತವಲ್ಲ ಬಲ್ಲೆನು ಮುರಹರನ ಮನವ |
ನೀವು ಮೋಗರೆಯಱಿತದವರೀ
ರಾವಣಾರಿಯ ಬಗೆಯನಱಿಯಿರಿ
ಸಾವೆನೀತನ ಕೈಯ ಬಾಯಲಿ ಭೀತಿ ಬೇಡೆಂದ || ೫೩

ಮಣಿದು ಬದುಕುವನಲ್ಲ ಹಗೆಯಲಿ
ಸೆಣಸಿ ಬಿಡುವವನಲ್ಲ ದಿಟ ಧಾ
ರಿಣಿಯ ಸಿರಿಗೆಳಸುವವನಲ್ಲಳುಕಿಲ್ಲ ಕಾಯದಲಿ |
ರಣಮಹೋತ್ಸವವೆನ್ನ ಮತ ಕೈ
ದಣಿಯೆ ಹೊಯ್ದಾಡುವೆನು ಕೃಷ್ಣನ
ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ || ೫೪

ಮನದೊಳಗೆ ನಸುನಗುತ ಮುನ್ನಿನ
ಮನುಜನಾಕಾರವನು ತಾ ಮಗು
ಳನುಕರಿಸಿ ಧೃತರಾಷ್ಟ್ರ ಭೀಷ್ಮರಿಗೆಂದನೀ ಹದನ।
ಜನಪ ಕೌರವ ಪಾಂಡುನಂದನ
ರೆನಗೆ ಸರಿ ಈ ಚಿಂತೆ ನಮಗೇ
ಕೆನುತ ರಾಜಾಲಯುವನಸುರಧ್ವಂಸಿ ಹೊಱವಂಟ॥ ೫೫

ಬಂದು ವಿದುರನ ಮನೆಗೆ ದೇವ ಮು
ಕುಂದ ಕುಂತಿಯು ಕರೆದು ನಿನ್ನಯು
ಕಂದರೈವರ ಮೇಲೆ ಕೌರವ ನೃಪನ ಖತಿ ಹಿರಿದು।
ಇಂದು ಮುಱಿದುದು ಸಂಧಿ ನಿನ್ನಯ
ಕಂದ ಕರ್ಣನ ಬೇಡಿಕೊಳು ನೀ
ನೆಂದು ಸೂಚಿಸಿ ಮರಳಿದನು ಮುರವೈರಿ ಹರುಷದಲಿ॥ ೫೬

ವಿದುರ ಭಾರದ್ವಾಜ ಗೌತಮ
ನದಿಯುಮಗ ಧೃತರಾಷ್ಟ್ರನಾತನ
ಸುದತಿ ಕರ್ಣ ವಿಕರ್ಣ ಶಲ್ಯ ಸುಬಾಹು ಗುರುಸುತರು।
ವದನದುತ್ಸವವಡಗಿ ಕೃಷ್ಣನ
ಪದವನೋಲಗಿಸುತ್ತ ಬರೆ ಕರು
ಣದಲಿ ಕಮಲಾಕಾಂತನುಚಿತದಲವರ ಬೀಳ್ಕೊಟ್ಟ॥ ೫೭

ನಯದೊಳೇಕಾಂತದಲಿ ಸಲೆ ಕಾ
ರಿಯವ ನುಡಿದವನಾಸೆವಾಸಿಯ
ಬಯಸಲಾಗದು, ಹಿತವನೇ ಬಯಸುವುದು ಕುರುಕುಲಕೆ।
ನಿಯತವಿದು ಪಾಂಡವರೊಡನೆ ಸಂ
ಧಿಯೆ ಸರಸ, ಸಮರಾಂಗವೀಯ
ನ್ವಯಕೆ ನಿರ್ಣಯವೆಂದು ನೀವಾತಂಗೆ ಸಾಱುವುದು॥ ೫೮

ಎಂದು ಗಾಂಗೇಯಾದಿಗಳನರ
ವಿಂದನಾಭನು ಬೀಳುಕೊಟ್ಟನು
ನಿಂದು ತಾ ರವಿಸುತನ ಕರೆದನು ರಥದ ಹೊರೆಗಾಗಿ।

ಬಂದು ಕಿಱಿದೆಡೆಗಾಗಿ ಕಳುಹುವು
ದೆಂದು ನೇಮಿಸಿ ಬಳಿಕ ತಾಪಸ
ವೃಂದವನು ಕಳುಹಿದನು ಗದುಗಿನ ವೀರನಾರಯಣ ॥ ೫೯

## ೮. ಭೇದದಲಿ ಕುರುಕುಲವ ಕೊಂದನು

ಇನತನೂಜನ ಕೂಡೆ ಮೈದುನ
ತನದ ಸರಸವನೆಸಗಿ ರಥದಲಿ
ದನುಜರಿಪು ಬರಸೆಳೆದು ಕುಳ್ಳಿರಿಸಿದನು ಪೀಠದಲಿ ||
ಎನಗೆ ನಿಮ್ಮಡಿಗಳಲಿ ಸರಿಸೇ
ವನೆಯೆ ದೇವ ಮುರಾರಿಯಂಜುವೆ
ನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ || ೧

ಭೇದವಿಲ್ಲೆಲೆ ಕರ್ಣ ನಿಮ್ಮೊಳು
ಯಾದವರು ಕೌರವರೊಳಗೆ ಸಂ
ವಾದಿಸುವಡನ್ವಯಕೆ ಮೊದಲೆರಡಿಲ್ಲ ನಿನ್ನಾಣೆ |
ಮೇದಿನೀಪತಿ ನೀನು ಚಿತ್ತದೊ
ಳಾದುದಿಲ್ಲಟಿವೆನುತ ದಾನವ
ಸೂದನನು ರವಿಸುತನ ಕಿವಿಯಲಿ ಬಿತ್ತಿದನು ಭಯವ || ೨

ದಾನವಾಂತಕ ಬೆಸಸು ವಂಶವಿ
ಹೀನನನು ನಿಮ್ಮಡಿಗಳೊಡನೆ ಸ
ಮಾನಿಸುವರೇ ಸಾಕೆನುತ ತಲೆವಾಗಿ ಕೈಮುಗಿಯೆ |
ಮಾನನಿಧಿಯೆನ್ನಾಣೆ ಬಾರೈ
ನೀನು ನಮ್ಮೆಲ್ಲರ ಹವಣೆ ವರ ಬಯಕೆ.
ಭಾನುವಂಶಲಲಾಮ ನೀ ರಾಮಂಗೆ ಸರಿಯೆಂದ || ೩

ಕಳೆದುಕೊಂಡನು ವೀಳಯವನಂ
ಜುಳಿಯಲಾತಂಗಿತ್ತು ಕರ್ಣನ
ಕೆಲಕೆ ಬರಸೆಳೆದವನ ಕರದಲಿ ಕರತಳವನಿಕ್ಕಿ |
ಎಲೆ ದಿವಾಕರತನಯ ನಿನ್ನಯ
ಕುಲವನಜಿಯೆಯಲಾ ಸುಯೋಧನ
ನಲಿ ವೃಥಾ ಸೇವಕತನದಲಿಹುದುಚಿತವಲ್ಲೆಂದ || ೪

ಲಲನೆ ತಾ ಪಡೆದೈದು ಮಂತ್ರಂ
ಗಳಲಿ ಮೊದಲಿಗ ನೀನು ನಿನ್ನಯ
ಬಳಿ ಯುಧಿಷ್ಠಿರದೇವ ಮಾಜಿನೆಯಾತ ಕಲಿ ಭೀಮ |

ಫಲುಗುಣನು ನಾಲ್ಕನೆಯೊಳೈದನೆ
ಯಲಿ ನಕುಲಸಹದೇವರಾದರು
ಬಳಿಕ ಮಾದ್ರೀದೇವಿಯಲ್ಲಿಯುದೊಂದು ಮಂತ್ರದಲಿ ‖ ೫

ಆದಜಿ೦ನೀ ಪಾಂಡವರಲೈವರ
ಮೊದಲಿಗನು ನೀನಿರಲು ಧರಣಿಯು
ಕದನವಿತ್ತಂಡಕ್ಕೆ ಕಾಮಿತವಲ್ಲ ಭಾವಿಸಲು ।
ಇದು ನಿದಾನವು ಕರ್ಣ ನಿನ್ನ
ಭ್ಯುದಯವನೆ ಬಯಸುವೆನು ನಿನ್ನಯ
ಪದಕೆ ಕೆಡಹುವೆನೈವರನು ಬಹುದೆನ್ನ ಸಂಗಾತ ‖ ೬

ನಿನಗೆ ಹಸ್ತಿನಪುರದ ರಾಜ್ಯದ
ಘನತೆಯನು ಮಾಡುವೆನು ಕೌರವ
ಜನಪ ಪಾಂಡವಜನಪರೋಲೈಸುವರು ಗದ್ದುಗೆಯು ।
ನಿನಗೆ ಕಿಂಕರರೆರಡುಸಂತತಿ
ಯೆನಿಸಲೊಲ್ಲದೆ ನೀನು ದುರ್ಯೋ
ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ‖ ೭

ಎಡದ ಮೆಯ್ಯಲಿ ಕೌರವೇಂದ್ರನ
ಗಡಣ ಬಲದಲಿ ಪಾಂಡುಪುತ್ರರ
ಗಡಣವಿದಿರಲಿ ಮಾದ್ರಮಾಗಧ ಯಾದವಾದಿಗಳು ।
ನಡುವೆ ನೀನೋಲಗದೊಳೊಪ್ಪುವ
ಕಡುವಿಲಾಸವ ಬಿಸುಟು ಕುರುಪತಿ
ನುಡಿಸೆ ಜೀಯ ಹಸಾದವೆಂಬುದು ಕಷ್ಟ ನಿನಗೆಂದ ‖ ೮

ಶೌರಿಯುದಲಿದಿರಿಲ್ಲ ಕುಲದಲಿ
ಸೂರಿಯನ ಸುತನೊಡನೆ ಹುಟ್ಟಿದ
ವೀರರಗ್ಗದ ಪಾಂಡುತನಯರು ನಿನ್ನ ವೈಭವಕೆ ।
ಆರು ಸರಿಯೈ ಕರ್ಣ ನಡೆ ನಡೆ
ಧಾರಿಣೀಪತಿಯಾಗಿ ನೀನಿರೆ
ವೈರವಿತ್ತಂಡಕ್ಕೆ ಬಳಿಕಿಲ್ಲೆಂದನಸುರಾರಿ ‖ ೯

ಕೊರಳ ಸೆರೆ ಹಿಗ್ಗಿದವು ದೃಗುಜಲ
ವುರವಣಿಸಿ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ ।
ಹರಿಯ ಹಗೆ ಹೊಗೆದೋಱದುರುಹದೆ
ಬಱಿದೆ ಹೋಹುದೆ ತನ್ನ ಜನನವ
ನಱುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ ॥ ೧೦

ಕಾದಿ ಕೊಲುವಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದಡೆ ಕೌರವಂಗವನಿಯಲಿ ಹೊಗಲಿಲ್ಲ ।
ಭೇದದಲಿ ಹೊಕ್ಕಿಱಿದನೋ ಮಧು
ಸೂದನನು ತಾನಕಟೆನುತ ಚಿಂ
ತೋದಧಿಯಲದ್ದಂತೆ ಮೌನದೊಳಿದ್ದನಾ ಕರ್ಣ ॥ ೧೧

ಏನು ಹೇಳ್ವೆ ಕರ್ಣ ಚಿತ್ತ
ಗ್ಲಾನಿಯಾವುದು ನಿನಗೆ ಕುಂತೀ
ಸೂನುಗಳ ಬೆಸಗೈಸಿಕೊಂಬುದು ಸೇರದೇ ಮನಕೆ ।
ಹಾನಿಯಿಲ್ಲೆನ್ನಾಣೆ ನುಡಿ ದು
ಮ್ಮಾನವೇತಕೆ ಮರುಳುತನ ಬೇ
ಡಾನು ನಿನ್ನಪದೆಸೆಯ ಬಯಸುವನಲ್ಲ ಕೇಳೆಂದ ॥ ೧೨

ಮರುಳು ಮಾಧವ ಸಕಲ ರಾಜ್ಯದ
ಸಿರಿಗೆ ಸೋಲುವನಲ್ಲ ಕೌಂತೇ
ಯರು ಸುಯೋಧನರೆನಗೆ ಬೆಸಗೈವಲ್ಲಿ ಮನವಿಲ್ಲ ।
ಹೊರೆದ ದಾತಾರಂಗೆ ರಿಪುಗಳ
ಶಿರವನರಿದೊಪ್ಪಿಸುವೆನೆಂಬೀ
ಭರದೊಳಿದ್ದೆನು ಕೌರವೇಂದ್ರನ ಕೊಂದೆ ಸೀನೆಂದ ॥ ೧೩

ಒಡನೆ ಹುಟ್ಟಿದರೆಂಬ ಕಥನವ
ನೆಡೆಗೊಡದೆ ಬಣ್ಣಿಸಿದೆ ಪಾಂಡವ
ರಡಗು ಬಾಣಕೆ ಬಲಿಯೆನಿಪ್ಪೀ ಫಲವ ಮಾಣಿಸಿದೆ ।

ನುಡಿದು ಫಲವಿನ್ನೇನು ಕೌರವ
ರೊಡೆಯನಾದಂತಹೆನು ಬಾರೆನು
ಪೊಡವಿಯಲಿ ನೀ ಹರಹಿಕೊಳು ನಿನ್ನವರ ನಿಲಿಸೆಂದ ॥ ೧೪

ಹಲವು ಮಾತೇನಖಿಳಜನವೆ
ನ್ನಳಿವ ಸೊಗಸದು ಕೌರವೇಶ್ವರ
ನೊಲವು ತಪ್ಪಿಸೆ ಭುವನದೊಳಗೆನಗಾಪ್ತಜನವಿಲ್ಲ ।
ಸಲಹಿದನು ಮನ್ನಣೆಯಲೆನಗ
ಗ್ಗಳಿಕೆಯಲ್ಲದೆ ಹೀನವೃತ್ತಿಯ
ಬಳಸಿ ನಡಸನು ಕೌರವೇಂದ್ರನನೆಂತು ಮಱೆದಪೆನು ॥ ೧೫

ನೋಡಿ ದಣಿಯನು ನಿಚ್ಚಲುಚಿತವ
ಮಾಡಿ ದಣಿಯನು ಬಿರುದ ಹೊಗಳಿಸಿ
ಹಾಡಿ ದಣಿಯನು ಮಾನಸಿಧಿಯನದೆಂತು ಮಱೆದಪೆನು ।
ಕಾಡಲಾಗದು ಕೃಷ್ಣ ಖಾತಿಯ
ಮಾಡಲಾಗದು ಬಂದೆನಾದಡೆ
ರೂಢಿ ಮೆಚ್ಚದು ಕೌರವನ ಹಗೆ ಹರಿಬ ತನಗೆಂದ ॥ ೧೬

ವೀರ ಕೌರವರಾಯನೇ ದಾ
ತಾರನಾತನ ಹಗೆಯೆ ಹಗೆ ಕೈ
ವಾರವೇ ಕೈವಾರವಾದಂತಹೆನು ಕುರುನೃಪತಿ ।
ಶೌರಿ ಕೇಳ್ಕೈ ನಾಳೆ ಸಮರದ
ಭಾರದಲಿ ತೋಱುವೆನು ನಿಜಭುಜ
ಶೌರಿಯದ ಸಂಪನ್ನತನವನು ಪಾಂಡುತನಯರಲಿ ॥ ೧೭

ಅರುಣಜಲದಾಜ್ಯದಲಿ ಬಂಬಲು
ಗರುಳ ಚರುವಿನಲೆಲುವಿನೊಟ್ಟಿಲ
ಬೆರಳ ಸಮಿಧೆಯೊಳಡಗಿನಖಿಳಾಹುತಿಯ ರಚನೆಯಲಿ ।
ನರಕಪಾಲದ ಪಾತ್ರೆಯಲಿ ನಿಡು
ದೆರಳೆಗಳ ಕೇಶದ ಸುದರ್ಭಾಂ
ಕುರದಲಾಹವಯಜ್ಞದೀಕ್ಷಿತನಹೆನು ತಾನೆಂದ ॥ ೧೮

ಮಾರಿಗೌತಣವಾಯ್ತು ನಾಳಿನ
ಭಾರತವು ಬಹುಜೀವ ಹರೆಯುಲು
ಕೌರವನ ಋಣ ಹಿಂಗೆ ರಣದಲಿ ಸುಭಟಕೋಟಿಯನು ।
ತೀರಿಸಿಯೆ ಪತಿಯವಸರಕ್ಕೆ ಶ
ರೀರವನು ನೂಕುವೆನು ನಿನ್ನಯ
ಧೀರರೈವರ ನೋಯಿಸೆನು ರಾಜೀವಸಖನಾಣೆ ॥ ೧೯

ಎನಲು ಕರ್ಣನ ದೃಢವ ಕಂಡನು
ಮನದೊಳುತ್ಸಾಹಿಸಿದನಾದಡೆ
ಯನುಜರೈವರ ಹದನು ನಿನ್ನದು ಬಲುಹ ಮಾಡುವರೆ ।
ಮನಕೆ ಖತಿಯಹುದಱಿಹದಿರ್ದಡೆ
ತನಗೆ ಗುಣವಲ್ಲೆಂಬ ಕಾರಣ
ಯಿನಿಸನೊಡ್ಡಯಿಸಿದೆನು ನೀ ಸುಖಿಯಾಗು ಹೋಗೆಂದ ॥ ೨೦

ಬಂದರೊಳ್ಳಿತು ಬಾರದಿದ್ದಡೆ
ಕಂದ ಕೇಳ್ಕೆ ಮಧುರ ವಚನದಿ
ಮಂದಮತಿಯನು ತಿಳುಹಿ ತಮ್ಮಂದಿರಿಗೆ ರಾಜ್ಯವನು ।
ಇಂದು ಕೊಡಿಸುವುದುಚಿತ ಸಂಪ್ರತಿ
ಗಿಂದು ಸೇರಿಸು ನಿನ್ನ ಮಾತನು
ಹಿಂದುಗಳೆಯನು ಕೌರವೇಶ್ವರನೆಂದನಸುರಾರಿ ॥ ೨೧

ಮಸೆದುದಿತ್ತಂಡಕ್ಕೆ ಮತ್ಸರ
ವಸಮಸಂಗರರೀಗ ಸಂಧಿಯ
ನುಸಿರಿದಡೆ ಮನಗಾಣನೇ ಕೌರವಮಹೀಶ್ವರನು ।
ವಿಸಸನದ ಕಟ್ಟಾಳು ಮಂತ್ರವ
ನೆಸಗಲಾಗದು ತನ್ನ ವೀರಕೆ
ಮಸುಳಹುದು ಮುರವೈರಿ ಸಂಧಿಯನಱಿಯೆ ನಾನೆಂದ ॥ ೨೨

ಕಳುಹಬೇಹುದು ದೇವ ದಿನಪತಿ
ಯಿಳಿದನಪರಾಂಬುಧಿಗೆ ಸಂಪ್ರತಿ
ಯುಳಿದ ಹೊತ್ತಿಂದೀಗ ನೆಟ್ಟಗೆ ನೀವು ಪಾಂಡವರು ।

ಹುಲುಸರವಿ ಹಾವಹುದು ಹುತ್ತಿನ
ಬಳಿಯಲಿರಲಜ್ಞರಿಗೆ ಹಿಸುಣರ
ಬಳಕೆ ಹೊಗುವುದು ಕಳುಹಬೇಕೆಂದಘ್ರ್ಯಗಜಿಗಿದನು ॥ ೨೩

ಬೀಳುಕೊಂಡನು ಮನೆಗೆ ಬಂದು ವಿ
ಶಾಲಮತಿ ಚಿಂತಿಸಿದನಾ ಸಿರಿ
ಲೋಲ ಮಾಡಿದ ಮಂತ್ರ ಮನದಲಿ ನಟ್ಟು ಬೇರ್ವರಿಯೆ ।
ಕಾಳುಮಾಡಿದನಕಟ ಕುರುಪತಿ
ಬಾಳಲಱಿಯದೆ ಕೆಟ್ಟನೀ ಗೋ
ಪಾಲ ಬಱಿದೇ ಬಿಡನು ಜೀವವ ಕೊಳ್ಳದಿರನೆಂದ ॥ ೨೪

ವೀರ ರವಿಸುತನೊಂದು ದಿನ ರವಿ
ವಾರದಲಿ ಪರಿತೋಷ ಮಿಗೆ ಭಾ
ಗೀರಥಿಯ ತೀರದಲಿ ತಾತಂಗರ್ಘ್ಯವನು ಕೊಟ್ಟು ।
ಸೌರಮಂತ್ರವ ಜಪಿಸುತಿರಲೌ
ದಾರಿಯದ ಸುರತರುವ ಕುಂತೀ
ನಾರಿ ಕಾಣಲು ಬಂದಳಾತ್ಮಜನಿದ್ದ ನದಿಗಾಗಿ ॥ ೨೫

ಬರಲು ತಾಯ್ಗಿದಿರಾಗಿ ರವಿಸುತ
ನಿರದೆ ಬಂದನು ದಂಡದಂತಿರೆ
ಚರಣದಲಿ ವ್ಯೆಯಿಕ್ಕಲಾತನ ನೊಸಲ ನೆಗಹಿದಳು ।
ಬರಸೆಳೆದು ಬಿಗಿಯಪ್ಪಿದಳು ನೀ
ರುರವಣಿಸಿದುದು ನಯನದಲಿ ಸೆರೆ
ಕೊರಳಿಗೌಕಿದುದಳಲಿನಬುಧಿಯೊಳದ್ದಳಾ ಕುಂತಿ ॥ ೨೬

ಆ ಸಮಯದಲಿ ಗಂಗೆ ನಾರೀ
ವೇಷದಲಿ ನಡೆತಂದಳೆಲೆ ಕುಂ
ತೀಸತಿಯೆ ಕೈಯೆಡೆಯ ಕಂದನನೊಪ್ಪುಗೊಳು ನೀನು ।
ಈಸುದಿನಮಿವನಾಗುಹೋಗಿನ
ಗಾಸಿಯನು ಸಲೆ ಕಾಯ್ದೆನೆನ್ನೆಯ
ಭಾಷೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ ॥ ೨೭

ಇರಲಿರಲು ರವಿ ಬಂದನೆಕ್ಕಟಿ
ಕರೆದನೀತನ ಕಿವಿಯೊಳೆಲ್ಲವ
ನೊರೆದ ನಿನಗೆಲೆ ಮಗನೆ ಕುಂತೀದೇವಿ ತಾಯಹುದು ।
ಮುರಹರನ ಮತದಿಂದ ನಿನ್ನಯ
ಸರಳ ಬೇಡಲು ಬಂದಳಂದಾ
ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ ॥ ೨೮

ಬೆಸಸಿತಕ್ಕೆ ಪ್ರಸಾದವೆಂದನು
ಬಿಸಜಬಂಧುವ ಕಳುಹಿದನು ಮ
ನ್ನಿಸಿದನಿತ್ತಲು ಮಾತೆಯನು ಭಯಭರಿತ ಭಕ್ತಿಯಲಿ ।
ಒಸೆದು ಬಿಜಯಂಗೈದ ಹದನೇ
ನುಸಿರ ಬೇಹುದು ತಾಯೆಯೆನೆ ಶೋ
ಕಿಸುತ ನುಡಿದಳು ಕುಂತಿ ಕರ್ಣನ ಸೆಳೆದು ಬಿಗಿಯಪ್ಪಿ ॥ ೨೯

ಮಗನೆ ತಮ್ಮಂದಿರನು ಪಾಲಿಸು
ವಿಗಡತನವನು ಮಾಣು ಪರರೋ
ಲಗವ ನೀ ಮಾಡುವರೆ ನಿನಗಿತ್ತಂಡವನುಜರಲೆ ।
ಸೊಗಸು ನಾನೆಂದುದನು ಹಿಸುಣರ
ಹಗೆನುಡಿಯ ಕೇಳದಿರು ಪಟ್ಟವ
ಬಿಗಿಸಿಕೊಳು ಸಲಿಸೆನ್ನ ವಚನವನೆಂದಳಾ ಕುಂತಿ ॥ ೩೦

ತಾಯಹುದು ನಾ ಬಲ್ಲೆನಿದನಾ
ಕಾಯಜನ ಪಿತನರುಹೆ ತಿಳಿದೆನು
ರಾಯರಿತ್ತಂಡಕ್ಕೆ ಪಟ್ಟದ ಹಿರಿಯ ತಾನಹುದು ।
ರಾಯನೆನ್ನನು ನಚ್ಚಿ ಹೊರೆದನು
ಸಾಯಲಳುಕುವೆನೇ ಸುಡೇತಜಿ
ದೀ ಇಳೆಯ ಬಾಳಿಕೆ ಕೃತಘ್ನರಿಗಿಲ್ಲ ಗತಿಯೆಂದ ॥ ೩೧

ಮಕ್ಕಳೈವರಿಗಾಂ ಹಿರಿಯನಿದು
ತಕ್ಕ ಮಾತೆಲೆ ತಾಯೆ ಸಂದೇ
ಹಕ್ಕೆ ನೆಲೆಯಿಲ್ಲದು ನಿಲಲಿ ಧಾರಿಣಿಯ ಬಯಸುವಡೆ ।

ತಕ್ಕುದೇ ದಾತಾರನರಸಿಯೊ
ಳೊಕ್ಕತನವಿರಲಾರು ಮೆಚ್ಚುವ
ರಕ್ಕ ಹೇಳಾ ಹೇಸಳೇ ಜಯಲಕ್ಷ್ಮಿ ತನಗೆಂದ ॥ ೩೨

ಇಂದು ನೀವಱುಹಿದ ಬಳಿಕ ರವಿ
ನಂದನನು ಯೆಂದಱಿದೆನಲ್ಲದೆ
ಹಿಂದೆ ದುರ್ಯೋಧನನದಾವುದ ನೋಡಿ ಸಲಹಿದನು ।
ಬಂದು ಪಾಂಡವರೊಡನೆ ಕೂಡಿದ
ಡಿಂದು ಬಹುದಪಕೀರ್ತಿ ನಿಮ್ಮಡಿ
ಬಂದ ಕಾರ್ಯವ ಬಿಸಸಿ ಬೇಗದೊಳೆಂದನಾ ಕರ್ಣ ॥ ೩೩

ಆದೊಡೈವರು ಮಕ್ಕಳನು ತಲೆ
ಗಾದು ತೋಱ್ರಿ ಕಂದ ನಿನಗಿ
ನ್ನೀ ದುರಾಗ್ರಹ ಒಪ್ಪುವುದೆ ಕೌರವನ ಸೇವೆಯುಲಿ ।
ಹೋದ ಬಾಣವ ಮರಳಿ ತೊಡದಿರು
ಮಾಡು ಕಳೆ ವೈರವನೆನಲ್ಕೆ ಹ
ಸಾದವೆಂದನು ಬೀಳುಕೊಂಡನು ಬಂದನರಮನೆಗೆ ॥ ೩೪ .

## ೯. ಕೌಂತೇಯರ ಸಮಗ್ರದ ಬೀಡು

### ಕುರುಭೂಮಿಯಲಿ ರಂಜಿಸಿತು

ಕೇಳು ಜನಮೇಜಯ ಧರಿತ್ರೀ
ಪಾಲ ಸಂಧಿಯು ಮುಱಿದು ಲಕ್ಷ್ಮೀ
ಲೋಲನೈತರುತಿವರ ಹೊರೆಗಟ್ಟಿದನು ಸಾತ್ಯಕಿಯ ।
ಕೇಳಿದರು ಮುರಹರನ ಬರವನು
ಮೌಳಿಮಸ್ತಕದಖಿಳ ಧರಣೀ
ಪಾಲರಂದಿದಿರಾಗಿ ಬಂದರು ಸಕಲ ದಳಸಹಿತ ॥ ೧

ದೂರದಲಿ ದುಮ್ಮಾನಿಸಿದ ವದ
ನಾರವಿಂದವ ಕಂಡು ಸಂಧಿಗೆ
ಸೇರರವದಿರು ಒಲಿದುದಾಹವವೀತನಿರವಿನಲಿ
ಶೌರಿಗಾಯ್ತುಪಮಾನವಿದಲೇ
ಮಾರಿಗುತ್ಸವವೆನುತ ಬಂದನು
ಮಾರುತನ ಮಗನಸುರಮರ್ದನನಿಂಗಿತವನಱಿದು ॥ ೨

ದರುಶನವ ನೀಡಿದನು, ಕೃಷ್ಣನ
ಚರಣದಲಿ ಪೈಯಿಕ್ಕಿದನು ಮಿ
ಕ್ಕರಸುಗಳ ದ್ರುಪದಾದಿನಾಯಕರೆಱಗಿದರು ಪದಕೆ ।
ಪರಮಬಾಂಧವರೆಲ್ಲ ಜೀವಂ
ತರೆ ನದೀಸುತ ವಿದುರ ಗುರು ಕೃಪ
ಗುರುತನುಜ ಧೃತರಾಷ್ಟ್ರರೆಂದನು ಧರ್ಮನಂದನನು ॥ ೩

ಭೂಮಿಪತಿ ನಿಜಬಾಂಧವರು ಸು
ಕ್ಷೇಮಿಗಳು ತಾವೆಲ್ಲ ಸಿಮ್ಮಯ
ಕ್ಷೇಮಕುಶಲವ ಕೇಳಿದರು ಕಳುಹಿದರು ಹರಕೆಗಳ ।
ಆ ಮಹಾ ಸಂಗ್ರಾಮಮುಖದಲಿ
ತೋಮರದ ಕಾಣಿಕೆಗಳಲಿ
ಸುಪ್ರೇಮವನು ಬಳಸುವುದು ದುರ್ಯೋಧನನ ಮತವೆಂದ ॥೪

ಭೂಮಿಯೊಳಗರ್ಧವನು ಬೇಡಿದ
ಡಾ ಮಹಿಪ ನಿಮ್ಮೈವರಿಗೆ ಸಂ
ಗ್ರಾಮಭೂಮಿಯನ್ನೈದೆಕೊಟ್ಟನು ನಿಮ್ಮೊಳಪ್ರಿಯನೆ ।
ಸಾಮದಲಿ ಸೊಗಸಿಲ್ಲ ನೀವ್ ನಿ ಷ್ಕಾ
ಸ್ಸೀಮರಾದಡೆ ಹರಿವುದಿಂದು
ದ್ದಾಮ ಕುರುಭೂಮಿಯಲಿ ಬಲಸಹಿತವರ ಪತಿಕರಿಸಿ ॥ ೫

ಮುನಿದಡೆಯು ನಿಮ್ಮೊಳಗೆ ನೀವೆಂ
ಮನಕತವ ಮಾಡುವಿರಿ ಅಗ್ರಜ
ರನುಜರಲಿ ಕದಡಾದಡುಪಶಮಿಸುವುದು ನಿಮ್ಮೊಳಗೆ ।
ಎನಗೆ ನಿಮ್ಮಯ ದೂಸಱಿಂದಾ
ಯ್ತಿನಿತು ಸಭೆಯಲಿ ಮಾನಹಾನಿಗ
ಳೆನಲು ನೊಂದನು ಧರ್ಮಸುತ ತಾ ನಗುತಲಿಂತೆಂದ ॥ ೬

ಮುಳಿದು ಸುರಗಿಯನುಗಿದು ಗಗನವ
ನಿಲುಕಿ ಮಾಡುವುದೇನು ನಿಮ್ಮಡಿ
ಗಳಿಗೆ ತಪ್ಪಿದ ತರಳರಖಿಳವ್ಯಾಪ್ತಿಯೇಗುವುದು ।
ಖಳರು ಮಾಡಿದ ಖತಿಯನೆನ್ನಲಿ
ತಿಳಿದು ಮರೆಯಲು ಬೇಕು ಕರುಣಾ
ಜಲಧಿ ನೀವೆಂದಂಘ್ರಿಗಳ ಹಿಡಿದನು ಯುಧಿಷ್ಠಿರನು ॥ ೭

ಬಱಿದೆ ಕಾಡದಿರೇಳು ಮನದಲಿ
ಮಱೆದೆವಾಗಳೆ ಕೌರವರು ಮುಂ
ದಱಿಯದವಗಡಿಸಿದರು ಹೋಗಲಿಯೆಮ್ಮ ದೂಱೇಕೆ ।
ನೆಱೆವಣಿಗೆಯುಂಟಾದಡಿಂದಿನ
ಮಱುದಿವಸ ಸಂಗ್ರಾಮ, ಸೈರಿಸ
ಲಱಿಯರವದಿರು ನಡೆ ಕುರುಕ್ಷೇತ್ರಕ್ಕೆ ನೀನೆಂದ ॥ ೮

ಹಾನಿಯನು ತಾ ಹೊತ್ತು ಭೃತ್ಯರ
ಮಾನವನು ಪತಿಕರಿಸಬೇಹುದು
ತಾನೊಡೆಯನಾದಂಗೆ, ಗುಣವೆಮ್ಮೊಡೆಯ ನೀನಾಗಿ ।

ಮಾನಭಂಗವ ಧರಿಸಿಯೆಮ್ಮಭಿ
ಮಾನವನು ನೀ ನಿಲಿಸಿದ್ದೆ ಸಂ
ಧಾನವನು ಸೇರಿಸದೆ ಸಲಹಿದೆಯೆಂದನಾ ಭೀಮ ॥ ೯

ಮಾರಿಯುಱಿಕೆಗಳಡಗದಂತಕ
ನೂರು ತುಂಬದೆ ಶಾಕಿನಿಯರೊಡ
ಲ್ಲೋರೆ ನೆನೆಯದೆ ಡಾಕಿನಿಯರಿಗೆ ಡೊಳ್ಳು ಸಾಲಿಡದೆ।
ಕೌರವನ ತನಿಗರುಳ ದಂಡೆಯ
ತೋರಣದ ಬಾಗಿಲಲಿ ವಿಭವದಿ
ವಾರಣಾಹ್ವಯ ನಗರಿಯನು ಹೊಗದಿಹೆನೆ ನೋಡೆಂದ ॥ ೧೦

ತೋಱು ನಡೆ ಗಜಬಜಿಸಬೇಡಿ
ನ್ನಾಱುತಿಂಗಳೆ ನಾಳೆ ಪಯಣಕೆ
ಸಾಱಿಸೇಳೆಂದೆನುತುಪಪ್ಲವ್ಯಕ್ಕೆ ನಡೆತಂದು।
ಬೇಱೆಬೇಱೆವಸೀಶರಿಗೆ ಮ್ಮಣಿ
ಹಾಱರನು ಕಳುಹಿದನು ಕೃಷ್ಣನ
ದೂಱು ಬರಲಳವಡಿಸಿದರು ಸಂಗ್ರಾಮಸಾಧನವ ॥ ೧೧

ಜೋಳಿ ಹರಿದುದು ದೆಸೆದೆಸೆಯ ಭೂ
ಪಾಲರಿಗೆ ರಾಯಸದ ಹದನನು
ಕೇಳಿದಾಗಲೆ ಕವಿದು ಬಂದರು ತಮ್ಮ ದಳಸಹಿತ।
ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳವಂದಿನ ಮಱುದಿವಸ ವ್ರೈ
ಹಾಳಿಯನು ಹೊಱವಂಟರನಿಬರು ದೈತ್ಯರಿಪುಸಹಿತ ॥ ೧೨

ವೀರ ಪಾರ್ಥಂಗಿರುಳು ಸೋತಂ
ಗಾರವರ್ಮನು ಗಗನಚರಪರಿ
ವಾರ ಬಹುಳದಿ ಬಂದು ಕಂಡನು ಕಲಿಯುಧಿಷ್ಠಿರನ।
ಕೌರವೇಂದ್ರನನೊಯ್ದ ಸಮರಸು
ಧೀರ ಸಾಹಸಿ ಚಿತ್ರಸೇನನು
ದಾರಬಲದಲಿ ಬಂದು ಕಂಡನು ಮಿತ್ರಭಾವದಲಿ ॥ ೧೩

ಕಾರಿರುಳ ಪಟ್ಟಣಕೆ ಚಂದ್ರನ
ತೋರಣವ ಬಿಗಿದಂತೆ ದಾಡೆಗ
ಳ್ಳೋರಣದ ಹೊಳಹುಗಳ ಹೊಗರಿಡುವೊಡಲ ಕಪ್ಪುಗಳ ।
ಭಾರಿ ದೇಹನು ಭಟಭಯಂಕರ
ತೋರಹತ್ತನು ದೈತ್ಯಮಯ ಪರಿ
ವಾರ ಬಹುಳದಿ ಬಂದು ಕಂಡನು ಕಲಿ ಘಟೋತ್ಕಚನು ॥೧೪

ಬಲದ ದೆಖ್ಖಾಳವನು ನೋಡಿದ
ರೊಲವಿನಲಿ ನಿಜಸೇನೆಸಹಿತತಿ
ಬಲರುಪಪ್ಲವ್ಯಕ್ಕೆ ಬಂದರು ಹೊಕ್ಕರಾಲಯವ ।
ಬಳಿಕ ಸುಮುಹೂರ್ತದಲಿ ಹೊಱಗುಡಿ
ಗಳನು ಹೊಯಿಸಿದರಂದು ಯದುಕುಲ
ತಿಲಕ ಗದುಗಿನ ವೀರನಾರಾಯಣನ ನೇಮದಲಿ ॥ ೧೫

ಪರಿಮಿತಕೆ ತನ್ನಾಪ್ತ ಸಚಿವರ
ಕರಸಿಕೊಂಡನು ಕೃಷ್ಣರಾಯಂ
ಗರಸ ಬಿನ್ನಹ ಮಾಡಿದನು ನೃಪಕಾರ್ಯ ಸಂಗತಿಯ ।
ಧುರಕೆ ಸೇನಾನಾಥನಿಲ್ಲದೆ
ನೆರೆದ ಬಲ ಸಾಲಱುಹೆ ಮುರಿದಡೆ
ಹರೆವವೊಲು ಹುರುಳಿಲ್ಲ ದಳಪತಿಯಾವನಹನೆಂದ ॥ ೧೬

ದ್ರುಪದನಾಗಲಿಯೆಂದು ಕೆಲಬರು
ವಿಪುಳಬಲದ ವಿರಾಟನಾಗಲಿ
ನೃಪಶಿಖಂಡಿಯೆ ಎಂದು ಕೆಲಬರು ಭೀಮಸುತನೆಂದು ।
ಅಪರಿಮಿತ ಮತವಾಗೆ ಸಮರ
ವ್ಯಪಗತಾರಿ ಸುರೇಂದ್ರಸುತನೀ
ದ್ರುಪದಸುತ ಸೇನಾಧಿಪತಿಯಹುದೆಮ್ಮ ಮತವೆಂದ ॥ ೧೭

ಬಿಂಬವನು ಬೇಱರಿಸಿ ಬಹುಮತ
ವೆಂಬ ಬಿಸಿಲಲಿ ರಾಜನಯವೆಂ
ದೆಂಬ ನೈದಿಲು ನಲವುಗೆಟ್ಟಿದೆ ಕೃಷ್ಣ ಹೇಳೆನಲು ।

ಎಂಬುದೇನಿನ್ನಿಲ್ಲಿ ಸುಭಟಕ
ದಂಬಕಧಿಪತಿತನಕೆ ಫಲುಗುಣ
ನೆಂಬ ಮಾತೆಮ್ಮಭಿಮತವು ಭೂಪಾಲ ಕೇಳೆಂದ ॥ ೧೮

ಕರಸಿ ಧೃಷ್ಟದ್ಯುಮ್ನನನು ಸಂ
ಗರಕೆ ಸೇನಾಪತ್ಯವನು ವಿ
ಸ್ತರದಲಳವಡಿಸಿದರು ಸುಮುಹೂರ್ತದಿ ಸರಾಗದಲಿ ।
ಪುರದೊಳಗೆ ಗುಡಿ ನೆಗಹಿದವು ಭೂ
ಸುರರ ವಿಮಳಾಮ್ನಾಯ ರವ ವಿ
ಸ್ತರಿಸಲಳವಡಿಸಿದರು ಮಂಗಳ ವಿಹಿತ ವಸ್ತುಗಳ ॥ ೧೯

ಸೂಳವಿಸಿದವು ಕಟಕದಲಿ ನಿ
ಸ್ಸಾಳಕೋಟಿಗಳಲ್ಲಿ ಚೀರಿಯೆ ಹೆ
ಗ್ಗಾಳೆಗಳು ಸಾರಿದವು ಭಟರುಬ್ಬಟೆಯ ಬಿರುದುಗಳ ।
ಬಾಲಕಿಯರಾರತಿಯ ತಳಿಗೆಗ
ಳೋಳಿ ಸಂದಣಿಸಿದವು ವರ ಪಾಂ
ಚಾಲ ತನುಜಂಗೆಸಗಿದರು ಮೂರ್ಧಾಭಿಷೇಚನವ ॥ ೨೦

ದರುಶನವನಿತ್ತಖಿಳ ಧರಣೀ
ಶ್ವರರು ಕಂಡರು ಸೂತ ಮಾಗಧ
ವರ ವಿಬುಧ ವೈತಾಳಿಕರ ಕಾರ್ಪಣ್ಯವಡಗಿದವು ।
ಧುರಕೆ ಧೃಷ್ಟದ್ಯುಮ್ನನಾಜ್ಞೆಯ
ಲಿರವು ನಿಮಗೆಂದೆನುತ ಭೂಪಾ
ಲರ ನಿವಾಸದೊಳಂದು ಮಿಗೆ ಹೊಯಿಸಿದರು ಡಂಗುರವ ॥ ೨೧

ರೂಢಿಸಿದ ಸುಮುಹೂರ್ತದಲಿ ಹೊರ
ಬೀಡ ಬಿಟ್ಟರು ರಣಕೆ ಪಯಣವ
ಮಾಡಲೋಸುಗ ಸಾರಿದರು ನೃಪಪಾಳಯಂಗಳಲಿ ।
ಕೂಡಿತಾಹವ ಸೈನ್ಯ ಸಾಗರ
ವೀಡಿರಿದು ನಡೆಗೊಂಡುದುದಧಿಯ
ನೇಡಿಸುವ ಜೋಡಿಸಿದ ಜೋಕೆಯ ಘನರವಂಗಳಲಿ ॥ ೨೨

ಹರಿಯ ಚರಣಕ್ಕೆರಗಿ ವಿಜಯದ
ಹರಕೆಗಳ ಕೈಕೊಂಡು ರಥವನು
ತುರಗ ಗಜವನು ಗಡಣ ಮಿಗಲೇರಿದರು ಪಾಂಡವರು ।
ಗರುಡಸಿಂಧವನೆತ್ತಿ ದಾರುಕ
ನಿರದೆ ರಥವನು ಸುಳಿಸೆ ಯದುವೋ
ಹರದ ಮಧ್ಯದಲಸುರಧೂಳೀಪಟ್ಟ ಹೊರಿವಂತೆ ॥ ೨೩

ಮುಂದೆ ಹರಿರಥ ಹರಿವರೂಥದ
ಹಿಂದೆ ಧರ್ಮಜನೆಡಬಲದಲಾ
ನಂದನರು ಬೆಂಭಾಗದಲಿ ಭೀಮಾರ್ಜುನರು ಬರಲು ।
ಸಂದಣಿಸಿದುದು ಸೇನೆ ಸೈರಿಸಿ
ನಿಂದನಾದರೆ ಫಣಿಗೆ ಸರಿಯಿ
ಲ್ಲೆಂದು ಸುರಕುಲವುಲಿಯೆ ನಡೆದರು ಪಾಂಡುನಂದನರು ॥ ೨೪

ಅರರೆ ನಡೆದುದು ರಾಯಕಟಕದ
ತೆರಳಿಕೆಯ ಸಂರಂಭವಿಳಿಗ
ಚ್ಚರಿಯ ಬೀರಿತು ವರಕುರುಕ್ಷೇತ್ರಕ್ಕೆ ಗಮಿಸಿದರು ।
ಅರಿವಿಜಯಿಗಳು ನೆಲನ ಗೆಲಿವರು
ಹರಿಯ ನೇಮದಲೆಡೆಯರಿದು ಬಲ
ಶರಧಿ ಬಿಟ್ಟುದು ಕಳನ ಪಶ್ಚಿಮದೆಸೆಯ ಪಸರದಲಿ ॥ ೨೫

ಸೂಳವಿಸಿದವು ಸನ್ನೆಯಲಿ ನಿ
ಸ್ಸಾಳ ಕೋಟಿಗಳೊರಲಿದವು ಕಿಱು
ಗಾಳೆ ಸಂಚದಲೂದಿದವು ಮಾಣಿಸಿದವಬ್ಬರವ ।
ಕೇಳು ಜನಮೇಜಯಧರಿತ್ರೀ
ಪಾಲ ಮಾರ್ಗಶ್ರಮದೆ ಸೇನಾ
ಜಾಲ ಸೈವೆರಗಾಗಿ ನಿಂದುದು ಸಮರಭೂಮಿಯಲಿ ॥ ೨೬

ಮೇಲುಗುಡಿಗಳ ಭದ್ರದುಪ್ಪರ
ಸಾಲೆಗಳ ಮಂಡವಿಗೆಗಳ ಬ
ಲ್ಲಾಳದಡ್ಡಿಯ ಚಂಪೆಯದ ಗೂಡಾರದೋವರಿಯ ।

ಸಾಲಕಳಶದ, ಪಟ್ಟವಸ್ತ್ರದ
ಮೇಲುಗಟ್ಟಿನ ರಚನೆಯಲಿ ರಾ
ಜಾಲಯಂಗಳ ರಚಿಸಿದರು ಕುಂತೀಕುಮಾರರಿಗೆ ॥ ೨೭

ಅರಮನೆಯ ಬಲದಲಿ ಮುರಾಂತಕ
ನರಮನೆಯುದಱ ಕೆಲದಲರ್ಜುನ
ನಿರವು ಹಿಂದಣ ಭಾಗದಲಿ ನಕುಲಂಗೆ ಬೀಡಾರ ।
ಅರಿಭಯಂಕರ ಭೀಮಸೇನನ
ನಿರುಪಮಾಲಯವೆಡದ ದೆಸೆಯಲಿ
ಸರಿಸದಲಿ ಸೂತ್ರಿಸಿತು ಸಹದೇವಂಗೆ ನೃಪಭವನ ॥ ೨೮

ಎರಡು ಬಾಗಿಲ ಸೂತ್ರದಲಿ ವಿ
ಸ್ತರಿಸಿದಂಗಡಿ ಸೋಮವೀಧಿಯ
ತರಣಿವೀಧಿಯನವರವರ ಪಾಳಯಕೆ ಮುರಿವುಗಳ ।
ಸುರರು ಸೃಷ್ಟಿಸಬಾರದಿನ್ನುಳಿ
ದರಿಗೆ ಗೋಚರವಹುದೆ ಕೌಂತೇ
ಯರ ಸಮಗ್ರದ ಬೀಡು ಕುರುಭೂಮಿಯಲಿ ರಂಜಿಸಿತು ॥ ೨೯

ಬಲದ ಮುಂಗುಡಿ ಭೀಮನದು ಪಿಂ
ತಿಳೆಯೊಳಾತನ ಕಾಹು ಬೀಡಿನ
ವಳಯದಾರೈಕೆಗಳು ಸಾತ್ಯಕಿ ನಕುಲ ಪಾರ್ಥರಿಗೆ ।
ಬಲಮಹಾಂಬುಧಿಯೊಳಗಿರುಳು ಮೇ
ಲ್ತಳವರನು ಹೈಡಿಂಬಿ ಪಾಂಡವ
ರುಳಿವು ಗದುಗಿನ ವೀರನಾರಾಯಣನ ಸ್ಥುಯಿಥಾನ ॥ ೩೦

ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದ ಮಧುಪಾನಪರಿಪುಷ್ಪವಚಷಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರವಿರಚಿತಮಪ್ಪ
ಕರ್ಣಾಟಕಭಾರತಕಥಾಮಂಜರಿಯೊಳ್
ಉದ್ಯೋಗಪರ್ವ ಸಂಗ್ರಹಂ
ಸಮಾಪ್ತಂ

# ಶಬ್ದಕೋಶ

[ಸೂಚನೆ—ಮೊದಲನೆಯ ಸಂಖ್ಯೆ ಸಂಧಿಯನ್ನೂ, ಎರಡನೆಯ ಸಂಖ್ಯೆ ಪದ್ಯಗಳನ್ನೂ ಸೂಚಿಸುತ್ತದೆ. ಸಂ. ಎಂದರೆ ಸಂಸ್ಕೃತ ಎಂದರ್ಥ.]

## ಅ

| | | | |
|---|---|---|---|
| ಅಕ್ಕಜ | ೩ | ೪ | ಆಶ್ಚರ್ಯ |
| ಅಂಕ | ೪ | ೪ | ತೊಡೆ |
| ಅಗಧರ | ೨ | ೧೪ | ಬೆಟ್ಟವನ್ನು ಎತ್ತಿ ಹಿಡಿದವನು, ಕೃಷ್ಣ |
| ಅಗಡುತನ | ೭ | ೨೪ | ತುಂಟತನ |
| ಅಂಗಚಿತ್ತ | ೩ | ೩ | ಬಹುಮಾನ |
| ಅಂಗವಟ್ಟ | ೬ | ೪೯ | ರೂಪು |
| ಅಘ | ೬ | ೩೫ | ಪಾಪ |
| ಅಡಗು | ೮ | ೧೮ | ಮಾಂಸ |
| ಅದ್ದು | ೮ | ೧೧ | (ಅಳ್ದು) ಮುಳುಗು |
| ಅಂದಣ | ೫ | ೪೬ | ಪಲ್ಲಕ್ಕಿ |
| ಅಧಟು | ೩ | ೭ | ಪರಾಕ್ರಮ |
| ಅನ್ವಯ | ೭ | ೫೮ | ವಂಶ |
| ಅಪರ + ಅಂಬುಧಿ | ೮ | ೨೩ | ಪಶ್ಚಿಮ ಸಮುದ್ರ |
| ಅಪಾಂಗ | ೫ | ೧೨ | ಕಡೆಗಣ್ಣ ನೋಟ |
| ಅಮ್ಮು | ೬ | ೪೩ | ಸಮರ್ಥನಾಗು |
| ಅಱಕೆ | ೯ | ೧೦ | ಬಾಯಾರಿಕೆ |
| ಅರಾತಿ | ೫ | ೧ | ಶತ್ರು |
| ಅವಗಡಿಸು | ೩ | ೧೬ | ಪ್ರತಿಭಟಿಸು |
| ಅವಲೋಕನ | ೪ | ೬ | ನೋಟ |
| ಅವಸರ | ೬ | ೨೦ | ಸಮಯ |
| ಅಸ್ಮದಾದ್ಯರು | ೬ | ೩೮ | ನಮ್ಮಂಥವರು |
| ಅಸಿಧಾರೆ | ೩ | ೧೯ | ಕತ್ತಿಯ ಬಾಯಿ |
| ಅಳವಡಿಸು | ೬ | ೪೪ | ಸಿದ್ಧಪಡಿಸು |
| ಅಳವು | ೨ | ೩೩ | ಸಾಮರ್ಥ್ಯ |
| ಅಳ್ಳಿಱಿ | ೯ | ೨೦ | ಭೇದಿಸು |

| | | | |
|---|---|---|---|
| ಅಳುಪು | ೩ | ೩೨ | ಆಶೆ |
| ಅಂಕುರ | ೮ | ೧೮ | ತುಂಡು, ಮೊಳಕೆ |

ಆ

| | | | |
|---|---|---|---|
| ಆನು | ೪ | ೧೬ | ಎದುರಿಸು |
| ಆಮ್ನಾಯ | ೯ | ೨೦ | ವೇದ |
| ಆಯತ | ೪ | ೨ | ವಿಸ್ತಾರ |
| ಆರ್ಪ್ | ೨ | ೨೮ | ಸಮರ್ಥನಾಗು |
| ಆರೋಗಣೆ | ೬ | ೨ | ಊಟ |
| ಆಸೆವಾಸಿ | ೭ | ೫೮ | ಇಷ್ಟ ಮತ್ತು ಕೀರ್ತಿ ? |
| ಆಹವ | ೨ | ೫ | ಯುದ್ಧ |
| ಆಳಿಕಾಱ | ೬ | ೨೦ | ಮೋಸಗಾರ, ತಂತ್ರಿ |

ಇ

| | | | |
|---|---|---|---|
| ಇಕ್ಕಲಿಸು | ೨ | ೪ | ಎರಡು ಕಡೆಯಿಂದಲೂ ಸೇರು |

ಉ

| | | | |
|---|---|---|---|
| ಉಗಿ | ೩ | ೩೬ | ಎಳೆ, ಹೊರಗೆ ತೆಗೆ |
| ಉಗ್ಗಡಣೆ | ೬ | ೩೨ | ಘೋಷಣೆ |
| ಉತ್ತರಾಯಿ | ೩ | ೩೫ | ಉತ್ತರ ಕೊಡುವವನು |
| ಉಪ್ಪವಡಿಸು | ೨ | ೧೬ | ನಿದ್ರೆಯಿಂದ ಎಚ್ಚರಗೊಂಡು ಏಳು |
| ಉಬ್ಬಾಳುತನ | ೭ | ೪೭ | ಶಕ್ತಿ |
| ಉಬ್ಬೇಳು | ೪ | ೩ | ಉಬ್ಬಿ+ಏಳು, ಸಂಭ್ರಮಗೂಡಿ ಏಳು |
| ಉಮ್ಮಳಿಸು | ೩ | ೧ | ಕಾತರಗೊಳ್ಳು |
| ಉರವಣಿಸು | ೮ | ೨೭ | ಅತಿಶಯವಾಗಿ ಕಾಣಿಸಿಕೊಳ್ಳು |
| ಉಱಂಬು | ೬ | ೨೯ | ಮೇಲೆಬೀಳು |
| ಉಱಂವ | ೨ | ೨೬ | ಶ್ರೇಷ್ಠ, ದೊಡ್ಡ |

ಊ

| | | | |
|---|---|---|---|
| ಊರು | ೫ | ೨೫ | ತೊಡೆ |

ಎ

| | | | |
|---|---|---|---|
| ಎಕ್ಕಟಿ | ೩ | ೩೦ | ಏಕಾಂತ |

| | | | |
|---|---|---|---|
| ಎಡೆ+ಗಿಡು | ೨ | ೧೦ | ಸ್ಥಳಪಲ್ಲಟವಾಗು |
| ಎಱಕ | ೨ | ೨೭ | ಪ್ರೀತಿ |
| ಎರವಿಗ | ೭ | ೪೨ | ಬೇರೆಯವ, ಅನ್ಯ |

## ಏ

| | | | |
|---|---|---|---|
| ಏಳಿಲ | ೫ | ೩೪ | ತಿರಸ್ಕಾರ |

## ಒ

| | | | |
|---|---|---|---|
| ಒಕ್ಕತನ | ೨ | ೧೯ | ಸಂಸಾರ ಮಾಡುವಿಕೆ |
| ಒಗು | ೩ | ೪ | ಬೀಳು |
| ಒಟ್ಟಿಲು | ೮ | ೧೩ | ಸಮೂಹ |
| ಒಯ್ಯನೆ | ೨ | ೧೫ | ನಿಧಾನವಾಗಿ |

## ಓ

| | | | |
|---|---|---|---|
| ಓರಣ | ೯ | ೧೪ | ಸಾಲು |
| ಓರೆಗೆಡೆ | ೩ | ೩೩ | ಪಕ್ಕಕ್ಕೆ ಸರಿ |
| ಓವರಿ | ೫ | ೨ | ಕೋಣೆ |
| ಓಳಿ | ೮ | ೨೧ | ಸಾಲು |

## ಕ

| | | | |
|---|---|---|---|
| ಕಟಕ | ೨ | ೩೨ | ಸೈನ್ಯ |
| ಕಡುಹು | ೪ | ೨ | ಪರಾಕ್ರಮ, ದರ್ಪ |
| ಕಬರಿ | ೫ | ೩೪ | ತುರುಬು |
| ಕರಣ | ೬ | ೫ | ಇಂದ್ರಿಯ |
| ಕಲ್ಪ | ೩ | ೩೬ | ಪ್ರಳಯ |
| ಕಂಡೆಯ | ೩ | ೩೬ | ಒಂದು ತೆರನಾದ ಕತ್ತಿ |
| ಕಾಲ | ೭ | ೨೮ | ಯಮ |
| ಕಿಬ್ಬದಿ | ೩ | ೩೬ | ಕೆಳಹೊಟ್ಟೆ, ಕಿಬ್ಬೊಟ್ಟೆ |
| ಕುಠಾರ | ೭ | ೧೭ | (ಕೊಡಲಿ) ದುಷ್ಟ |
| ಕುಂಜರ | ೫ | ೩೪ | ಆನೆ |
| ಕೂರಸಿ | ೪ | ೯ | ಹರಿತವಾದ ಕತ್ತಿ |
| ಕೈತವ | ೬ | ೩೦ | ಮೋಸ |
| ಕೈದು | ೩ | ೨೨ | ಆಯುಧ |
| ಕೈವಲ್ಯ | ೭ | ೫೪ | ಮೋಕ್ಷ |

| | | | |
|---|---|---|---|
| ಕೈವಾರ | ೫ | ೧೪ | ಹೊಗಳಿಕೆ |
| ಕೊಳುಗುಳ | ೫ | ೬ | ಯುದ್ಧ |
| ಕೋಲು | ೭ | ೨೮ | ಬಾಣ |

## ಗ

| | | | |
|---|---|---|---|
| ಗರ | ೪ | ೧೨ | ಗ್ರಹ (ಸಂ.) |
| ಗರುವ | ೬ | ೬ | ದೊಡ್ಡ |
| ಗರುವಾಯಿ | ೪ | ೩೮ | ದೊಡ್ಡತನ |
| ಗಳಹು | ೪ | ೧೨ | ಹರಟು |
| ಗಾವಳಿ | ೬ | ೮ | ಅಬ್ಬರ |
| ಗಾಸಿ | ೮ | ೨೭ | ತೊಂದರೆ |
| ಗುಡಿ | ೩ | ೧ | ಬಾವುಟ, ಧ್ವಜ |

## ಚ

| | | | |
|---|---|---|---|
| ಚಪಾಳಿಸು | ೫ | ೨೨ | ಹೆಚ್ಚಾಗು |
| ಚರು | ೮ | ೧೮ | ಅನ್ನ, ಹವಿಸ್ಸು |
| ಚಾಮೀಕರ | ೬ | ೨೩ | ಬಂಗಾರ |
| ಚಾಳಿಸು | ೬ | ೨೨ | ಹೋಗು, ಕಳೆ |
| ಚೌಕಿಗೆ | ೩ | ೮ | ಮನೆಯ ಒಳಗಡೆಯ ಅಂಗಳ |
| ಚಂಪೆಯ | ೯ | ೨೭ | ಚಂಬತವಱೆ-ವಾದ್ಯವಿಶೇಷ ನಗಾರಿ |

## ಜ

| | | | |
|---|---|---|---|
| ಜಾಳಿಗೆ | ೫ | ೩೮ | ಸಮೂಹ |
| ಜಿನುಗು | ೨ | ೧೩ | ಗೊಣಗು |
| ಜೋಳಿ | ೯ | ೧೨ | ನಿರೂಪ |
| ಜೌವ್ವನ | ೨ | ೨೮ | ಯೌವನ (ಸಂ) ಪ್ರಾಯ |
| ಜಂಗಮ | ೩ | ೨೧ | ಸಂಚರಿಸುವ |

## ಡ

| | | | |
|---|---|---|---|
| ಡಿಂಬ | ೪ | ೧೬ | ದೇಹ |
| ಡೊಳ್ಳು | ೯ | ೧೦ | ದೊಡ್ಡ ಹೊಟ್ಟೆ |

## ತ

| | | | |
|---|---|---|---|
| ತಳಿಗೆ | ೯ | ೨೦ | ತಟ್ಟೆ |
| ತಳಿತ | ೩ | ೩೩ | ಪ್ರಾಪ್ತವಾದ |

| | | | |
|---|---|---|---|
| ತಾಣ | ೨ | ೧೩ | ಸ್ಥಾನ(ಸಂ) |
| ತಾಳಿಗೆ | ೨ | ೨ | ಅಂಗುಳು |
| ತಿಂಥಿಣಿ | ೧ | ೩ | ಸಮೂಹ |
| ತೀವು | ೫ | ೩೫ | ತುಂಬು |
| ತೊಡರು | ೫ | ೨೬ | ಬಿರುದಿನ ಆಭರಣ |
| ತೋರಹತ್ತ | ೯ | ೧೪ | ದೊಡ್ಡ ಕೈಯುಳ್ಳವನು |

### ದ

| | | | |
|---|---|---|---|
| ದಶನ | ೬ | ೫೧ | ಹಲ್ಲು |
| ದ್ವಿಜ | ೧ | ೫ | ಬ್ರಾಹ್ಮಣ |
| ದಿಂಡುದಱಿ | ೪ | ೧೪ | ತುಂಡು ತುಂಡು ಮಾಡು |
| ದೂಱು | ೮ | ೧೧ | ಕರೆ ? |
| ದೆಖ್ಖಾಳ | ೯ | ೧೫ | ಹೆಚ್ಚಿಗೆ |
| ದೇಸಿಗ | ೪ | ೬ | ಭಿಕಾರಿ |

### ಧ

| | | | |
|---|---|---|---|
| ಧ್ರುವ | ೭ | ೧ | ಸ್ಥಿರವಾದ |

### ನ

| | | | |
|---|---|---|---|
| ನಚ್ಚು | ೮ | ೩೧ | ನಂಬು |
| ನಂಜು | ೫ | ೩೪ | (ವಿಷ) ಹಾವು |
| ನಿರ್ಜರ | ೪ | ೧೫ | ದೇವತೆ |
| ನಿರ್ವೃತ | ೩ | ೨೭ | ಕುಶಲ |
| ನಿಸ್ಸಾಳ | ೯ | ೧೨ | ಭೇರಿ |
| ನೆಗಳ್ | ೭ | ೧೬ | ಮಾಡು |
| ನೆಗಹು | ೫ | ೨೩ | ಎತ್ತು |
| ನೆರವಣಿಕೆ | ೯ | ೮ | ಪರಿಪೂರ್ಣತೆ |
| ನೋನ್ | ೫ | ೧೮ | ವ್ರತವನ್ನು ಆಚರಿಸು |

### ಪ

| | | | |
|---|---|---|---|
| ಪಡಿಹಾರಿಕೆ | ೨ | ೩೪ | ಬಾಗಿಲು ಕಾಯುವಿಕೆ |
| ಪತಿಕರಿಸು | ೯ | ೫ | ಅನುಗ್ರಹಿಸು |
| ಪ್ರತಿಪನ್ನತೆ | ೩ | ೨೯ | ಜಾಣ್ಮೆ |
| ಪ್ರಥಿತ | ೩ | ೩ | ಪ್ರಸಿದ್ಧವಾದ |
| ಪ್ರಮಿತಿ | ೪ | ೧೪ | ನಿಷ್ಕೃಷ್ಟ ಜ್ಞಾನ |
| ಪರಮಂಡಲ | ೫ | ೨೬ | ಶತ್ರುರಾಜ್ಯ |

| | | | |
|---|---|---|---|
| ಪರುಠವಿಸು | ೩ | ೮ | ವಿಸ್ತಾರವಾಗಿ ಸಿದ್ಧಪಡಿಸು |
| ಪವಮಾನ | ೫ | ೬ | ವಾಯು |
| ಪಾರ್ಥಿವ | ೨ | ೨೨ | ಕ್ಷತ್ರಿಯ |
| ಪಾವಕ | ೩ | ೩೪ | ಅಗ್ನಿ |
| ಪಾವುಡ | ೩ | ೨೬ | ಉಡುಗೊರೆ |
| ಪುರುಷಾರ್ಥ | ೭ | ೧ | . ಧರ್ಮ, ಅರ್ಥ, ಕಾಮ, ಮೋಕ್ಷ |
| ಪುಳಕ | ೬ | ೧೨ | ರೋಮಾಂಚ |
| ಪೊಡವಿ | ೭ | ೧೪ | ಪೃಥ್ವೀ (ಸಂ) ಭೂಮಿ |

ಬ

| | | | |
|---|---|---|---|
| ಬಣಗು | ೧ | ೩ | ಕೀಳು, ಸಾಮಾನ್ಯ |
| ಬಂಧುರ | ೬ | ೨೬ | ಮನೋಹರವಾದ |
| ಬಲ್ಲಾಳ ದಡ್ಡಿ | ೯ | ೨೭ | ? |
| ಬೀಯ | ೩ | ೨೦ | ಆಹಾರ |
| ಬೆಟ್ಟಿತು | ೪ | ೬ | ಕಠಿಣವಾದ |
| ಬೊಪ್ಪ | ೩ | ೨೬ | ತಂದೆ |
| ಬೋವತನ | ೨ | ೩೪ | ಸಾರಥಿತನ |

ಭ

| | | | |
|---|---|---|---|
| ಭರಣ | ೨ | ೪ | ಪೋಷಣೆ |
| ಭಾರಣೆ | ೪ | ೯ | ಭಾರ, ಹೊರೆ |
| ಭೀಮ | ೫ | ೧೭ | ಭಯಂಕರ |
| ಭೂರಿ | ೨ | ೨೯ | ದೊಡ್ಡದಾದ |
| ಭಂಡಾರಿಸು | ೨ | ೨೮ | ಬೆಂಡಾಗಿ ಹೋಗು ? |

ಮ

| | | | |
|---|---|---|---|
| ಮಖಸಮುದ್ಭವೆ | ೩ | ೨೬ | ಯಜ್ಞದಲ್ಲಿ ಹುಟ್ಟಿದವಳು, ದ್ರೌಪದಿ. |
| ಮಣಿಹಾಱ | ೯ | ೧೧ | ಅರಮನೆಯ ಮುಖ್ಯಾಧಿಕಾರಿ |
| ಮನಕತ | ೯ | ೬ | ದುಃಖ |
| ಮನ್ನೆಯ | ೨ | ೨೩ | ಮಾನ್ಯ (ಸಂ) |
| ಮಮ ಜೀವಾ ಹಿ | ೭ | ೬ | ನನ್ನ ಪ್ರಾಣಗಳು ಅಲ್ಲವೆ ? |
| ಮಯೂಖ | ೬ | ೫೧ | ಕಿರಣ |
| ಮರೀಚಿ | ೭ | ೬ | ಕಿರಣ |
| ಮಸುಳು | ೮ | ೨೨ | ಮಂಕಾಗು |
| ಮಂಡವಿಗೆ | ೩ | ೯ | ಮಂಟಪ |

| | | | |
|---|---|---|---|
| ಮಾರ್ಗಣ | ೫ | ೧೭ | ಬಾಣ |
| ಮುಕುಳಕರಪುಟ | ೨ | ೧೫ | ಮುಚ್ಚಿದ ಕೈ ಬೊಗಸೆಯುಳ್ಳವನು |
| ಮೇಳ | ೨ | ೧೭ | ಹೊಂದಿಕೆ, ಸಮಾನತೆ |
| ಮೊರೆ | ೭ | ೪೭ | ಶಬ್ದಮಾಡು |
| ಮೊಳಗು | ೫ | ೧೨ | ಶಬ್ದಮಾಡು, ಗುಡುಗು |
| ಮೋಹರ | ೧ | ೧೦ | ಸೈನ್ಯ |
| ಮೋಹು | ೬ | ೨೬ | ಒಂದೆಡೆ ಸೇರು |

**ರ**

| | | | |
|---|---|---|---|
| ರಾಯಸ | ೯ | ೧೨ | ಅಧಿಕಾರಿಯಿಂದ ಬಂದ ಓಲೆ |
| ರೂಢಿ | ೮ | ೧೬ | ಲೋಕ |

**ಲ**

| | | | |
|---|---|---|---|
| ಲೋಗ | ೩ | ೧೨ | ಲೋಕ (ಸಂ) ಸಾಮಾನ್ಯಮನುಷ್ಯ |

**ವ**

| | | | |
|---|---|---|---|
| ವ್ಯತಿಕರ | ೫ | ೧೬ | ಪರಸ್ಪರವಾದ ವ್ಯಸನ |
| ವಹಿಲ | ೨ | ೬ | ಬೇಗ |
| ವಂಕ | ೩ | ೨೧ | ಪಾರ್ಶ್ವ |
| ವಾರಣನಗರಿ | ೩ | ೧೩ | ಹಸ್ತಿನಾವತಿ |
| ವಿಗಡ | ೬ | ೪೯ | ದೊಡ್ಡ, ಮಹತ್ತುಳ್ಳ |
| ವಿಗ್ರಹ | ೫ | ೨೬ | ಯುದ್ಧ |
| ವಿರಂಚನ | ೩ | ೨೧ | ಬ್ರಹ್ಮ |
| ವಿಲಗ | ೨ | ೧೭ | ಜೋಡಣೆ ಇಲ್ಲದಿರುವಿಕೆ |
| ವಿಷ್ಟರ | ೫ | ೪೧ | ಪೀಠ |
| ವಿಸಟಂಬರಿ | ೩ | ೨೧ | ಸ್ವೇಚ್ಛೆಯಾಗಿ ತಿರುಗು |
| ವಿಸಸನ | ೮ | ೨೨ | ಯುದ್ಧ |
| ವೆಗ್ಗಳಿಸು | ೩ | ೨೨ | ಅತಿಶಯವಾಗಿ ತೋರು |
| ವೈತಾಳಿಕ | ೯ | ೨೧ | ಹೊಗಳುಭಟ್ಟ |
| ವೈರೋಚಿನಿ | ೨ | ೩೪ | ಬಲಿಚಕ್ರವರ್ತಿ |
| ವೈಹಾಳಿ | ೯ | ೧೨ | ಕುದುರೆ ಸವಾರಿ, ಕುದುರೆ ಸವಾರಿಯ ಪ್ರದರ್ಶನ |

**ಸ**

| | | | |
|---|---|---|---|
| ಸಪ್ತಾಂಗ | ೭ | ೨ | ರಾಜ್ಯದ ಏಳು ಅಂಗಗಳು |
| ಸಮಯ | ೩ | ೫ | ಅವಕಾಶ |

| | | | |
|---|---|---|---|
| ಸವೆ | ೬ | ೪ | ಸಿದ್ಧಪಡಿಸು |
| ಸಂಘಾತ | ೫ | ೨೭ | ಸಮೂಹ |
| ಸಂತರಿಸು | ೩ | ೩೫ | ಕಾಪಾಡು |
| ಸಂದೋಹ | ೬ | ೩೫ | ಸಮೂಹ, ಗುಂಪು |
| ಸಂಪ್ರತಿ | ೨ | ೨೧ | ಸಂಧಿ |
| ಸ್ಥಾವರ | ೫ | ೨೩ | ಸ್ಥಿರವಾದ |
| ಸಿತ | ೬ | ೩೮ | ಬಿಳಿಯ |
| ಸಿಂಧ | ೯ | ೩೨ | ಧ್ವಜ |
| ಸಿಂಧು | ೩ | ೧ | ಸಮುದ್ರ |
| ಸುಧಾ | ೧ | ೧ | ಅಮೃತ |
| ಸುರಗಿ | ೩ | ೨೦ | ಕತ್ತಿ |
| ಸುಷುಪ್ತಿ | ೩ | ೧೫ | ಗಾಢನಿದ್ರೆ |
| ಸೆಜ್ಜೆ | ೩ | ೭ | ಶಯ್ಯಾ (ಸಂ) ಹಾಸಿಗೆ |
| ಸೆರೆ | ೮ | ೧೦ | ಕುತ್ತಿಗೆಯ ಮೇಲಿನ ನರ |
| ಸೈವೆಱಗಾಗು | ೯ | ೩೬ | ಆಶ್ಚರ್ಯಪಡು |

ಹ

| | | | |
|---|---|---|---|
| ಹಚ್ಚಡಿಸು | ೬ | ೨ | ಹಾಸು |
| ಹದುಳ | ೩ | ೬ | ಕ್ಷೇಮ, ನಿಶ್ಚಿಂತೆ |
| ಹರಣ | ೩ | ೪ | ಪ್ರಾಣ (ಸಂ) |
| ಹರಿಬ | ೫ | ೧೮ | ಕರ್ತವ್ಯ |
| ಹಸಾದ | ೮ | ೮ | ಪ್ರಸಾದ (ಸಂ) ಏನಪ್ಪಣೆ |
| ಹಳವಿಗೆ | ೬ | ೩೯ | ಧ್ವಜ, ಬಾವುಟ |
| ಹಳುವ | ೨ | ೩೫ | ಕಾಡು |
| ಹಿಸುಣ | ೩ | ೩೩ | ಚಾಡಿಕೋರ |
| ಹೊಗರಿಡು | ೯ | ೧೪ | ಕಾಂತಿಯಿಂದ ಕೂಡು |
| ಹೊದಱು | ೭ | ೪೪ | ಗುಂಪು |
| ಹೊಲಬು | ೬ | ೭ | ದಾರಿ |
| ಹೊಲ್ಲೆಹ | ೨ | ೨೭ | ಕೆಟ್ಟತನ |